ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆ-೩೩

---

# ಬಂಥನಾಳ ಶ್ರೀ ಸಂಗನಬಸವ ಶಿವಯೋಗಿಗಳು

ಲೇಖಕರು :
ಈಶ್ವರಚಂದ್ರ ಚಿಂತಾಮಣಿ

೧೯೮೧

ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ

ಪ್ರಕಾಶಕರು :
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ.

ಗ್ರಂಥದಾನ :
ಶ್ರೀ ಶಂಕರಪ್ಪ ಕರಬಸಪ್ಪ ತಡಸದ
ಇವರ ಸ್ಮರಣಾರ್ಥ
ಶ್ರೀ ರಾಚಪ್ಪ ಮುರಿಗೆಪ್ಪ ಮಿಣಜಗಿ
ಗದಗ



ಬೆಲೆ : ೧–೫೦

೧೯೮೧ ಪ್ರಥಮ ಮುದ್ರಣ :

ಮುದ್ರಣ :
ವಿದ್ಯಾವಾಹಿನಿ ವಿದ್ಯುನ್ಮುದ್ರಣ (ಪುಸ್ತಕ ವಿಭಾಗ),
ಗಂಗಾಪೂರಪೇಟೆ, ಗದಗ

# ಮೊದಲ ಮಾತು

ಶಿವಶರಣರ ವಚನವಾಙ್ಮಯವನ್ನು ಮಥಿಸಿ ಸಾಹಿತ್ಯ ಸೌಂದರ್ಯವನ್ನು ಹರಿಹರ-ರಾಘವಾಂಕಾದಿಗಳು ಪ್ರಕಟಿಸಿದರೆ, ತತ್ತ್ವಸೌಂದರ್ಯವನ್ನು ಸಾಕ್ಷಾತ್ಕಾರಗೊಳಿಸಿದವರು ಏಳುನೂರೊಂದು ವಿರಕ್ತರು. ಈ ವಿರಕ್ತಸಮೂಹದ ನಾಯಕ ವ್ಯಕ್ತಿಯಾಗಿ, ವೀರಶೈವ ಧರ್ಮಪರಂಪರೆಯ ಯುಗಪುರುಷನಾಗಿ ಮೆರೆದವ ತೋಂಟದ ಸಿದ್ಧಲಿಂಗಯತಿ. ಪ್ರಭುವಿನಂತೆ ನಿರಂಜನಮೂರ್ತಿಯಾಗಿ, ಬಸವನಂತೆ ವೀರಶೈವ ಸಂಘಟಕನಾಗಿ, ಚೆನ್ನಬಸವಣ್ಣನಂತೆ ತತ್ತ್ವವೇತ್ತನಾಗಿ ಬೆಳಗಿದ ೧೫ನೇ ಶತಮಾನದ ಈ ಶಿವಯೋಗಿಸೂರ್ಯನ ಪೀಠ-ಪ್ರಪೀಠ ಪರಂಪರೆ, ಶಿಷ್ಯ-ಪ್ರಶಿಷ್ಯ ಪರಂಪರೆ ನಾಡಿನ ಒಳಗೆಲ್ಲ ತುಂಬಿದೆ, ಹೊರಗೆಲ್ಲ ತುಳುಕಿದೆ. ಅಂದಿನಿಂದಲೂ ಕನ್ನಡಿಗರ, ವಿಶೇಷವಾಗಿ ವೀರಶೈವ ಬದುಕನ್ನು ತಿದ್ದಿ, ಭಾವನೆಯನ್ನು ನೀಡಿ, "ಅಂಗವೇ ಶರಣ, ಲಿಂಗವೇ ಶಿವ" ಎಂಬ ಮಂತ್ರವನ್ನು ಘೋಷಿಸುತ್ತ ಶಿಷ್ಯಕೋಟಿಯನ್ನು ಪೋಷಿಸುತ್ತಬಂದ ಘನತೆ ಈ "ತೋಂಟದಾರ್ಯ ಪೀಠ ಪರಂಪರೆಗೆ" ಸಲ್ಲುತ್ತದೆ.

"ಶಿಷ್ಯರ ಸೇವೆಯೇ ಶಿವಪೂಜೆ"ಯೆಂಬ ಮಹಾಗುರು ತೋಂಟದಾರ್ಯರ ಸಂದೇಶದಂತೆ ನಡೆಯುವದು ತನ್ನ ಪರಮ ಕರ್ತವ್ಯವೆಂದು ಡಂಬಳ-ಗದುಗಿನ "ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ನಂಬಿದೆ. ಈ ನಂಬಿಕೆಯ ಫಲವಾಗಿ ೧೯೭೫ರಲ್ಲಿ ಸ್ಥಾಪಿತವಾದ 'ವೀರಶೈವ ಅಧ್ಯಯನ ಸಂಸ್ಥೆ'ಯ

ಅಂಗವಾಗಿ ಪ್ರಾರಂಭವಾದ "ವೀರಶೈವ ಪುರಾತನ ನೂತನ ಹಾಗೂ ಅನುವಾದ ಸಾಹಿತ್ಯ ರತ್ನಮಾಲೆಯು"ಯ ಜೊತೆ "ವೀರಶೈವ ಪುಣ್ಯಪುರುಷ ಸಾಹಿತ್ಯ ರತ್ನಮಾಲೆ" ಉದಯ ವಾಗಿದೆ.

ಸಮಾಜದಲ್ಲಿ ಘಟಿಸಿದ ಸತ್ಕಾರ್ಯಗಳ 'ದಾಖಲೆ'ಸಮಾಜ ವನ್ನುದ್ಧರಿಸಿದ ಪುಣ್ಯಪುರುಷರ ಚರಿತ್ರೆಗಳು ಮುಂದಿನ ಪೀಳಿಗೆಗೆ ದಾರಿದೀಪವೂ ಹೌದು, ತೋರುಬೆರಳೂ ಹೌದು. ಕಾರಣ ಇತ್ತೀಚಿನ ದಿನಗಳಲ್ಲಿ ಸಮಾಜವನ್ನು ಕಟ್ಟಿ ಬೆಳೆಸಿದ, ಸಮಾಜಕ್ಕಾಗಿ ದುಡಿದ ಮಹಾತ್ಮರ ಚರಿತ್ರೆಗಳನ್ನು ಬರೆದು ಪ್ರಕಟಿಸಬೇಕೆಂಬ ಉದ್ಧೇಶದಿಂದ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ೧೯-೨೦ನೆಯ ಶತಮಾನಗಳಲ್ಲಿ ಬಾಳಿದ ನೂರಾರು ಜನ ವೀರಶೈವ ಪುಣ್ಯಪುರುಷರಲ್ಲಿ ಪ್ರತಿ ತಿಂಗಳು ಒಬ್ಬರನ್ನು ಕುರಿತು ಉಪನ್ಯಾಸವನ್ನೇರ್ಪಡಿಸುವದು, ಏರ್ಪಡಿಸಿದ ಉಪನ್ಯಾಸವನ್ನು ಪ್ರಕಟಿಸಿ ಸುಲಭ ಬೆಲೆಯಲ್ಲಿ ವಿತರಣೆಗೊಳಿಸುವದು ಈ ಮಾಲಿಕೆಯ ಸಂಕಲ್ಪವಾಗಿದೆ. ಈ ತಿಂಗಳು ಪ್ರಕಟವಾಗುವ ಈ ಮಾಲಿಕೆಯಲ್ಲಿ ಮೂವತ್ತಮೂರನೆಯ ಕೃತಿ "ಬಂಥನಾಳದ ಶ್ರೀ ಸಂಗನಬಸವ ಶಿವಯೋಗಿಗಳು".

ಧರ್ಮಪೀಠಾಧಿಕಾರಿಗಳು ಮನಸ್ಸು ಮಾಡಿದರೆ ಎಷ್ಟು ಆಳ-ಅಗಲ-ಎತ್ತರಕ್ಕೆ ಬೆಳೆಯಬಲ್ಲರು; ಸಮಾಜವನ್ನು ಬೆಳೆಸಬಲ್ಲರು ಎಂಬುದಕ್ಕೆ ಶ್ರೀ ಬಂಥನಾಳ ಶಿವಯೋಗಿಗಳು ನಿತ್ಯ ನಿದರ್ಶನ. ತಮ್ಮ ಜೀವಿತಕಾಲದಲ್ಲಿ "ಗಗನಂ ಗಗನಾಕಾರಂ, ಸಾಗರಂ ಸಾಗರೋಪಮಂ"ಎಂಬಂತೆ ಉಪಮಾನೋಪಮೇಯ

ವಾಗಿ ಬದುಕಿದ ಶ್ರೀಗಳವರಿಂದ ವಿಜಾಪುರ ಜಿಲ್ಲೆ ಒಂದರ್ಥದಲ್ಲಿ ಮತ್ತೊಮ್ಮೆ "ಬಸವ ಯುಗ"ವನ್ನು ಮೆರೆಯಿತು. ಧರ್ಮ-ರಾಷ್ಟ್ರಧರ್ಮಗಳ ಸಂಗಮವಾಗಿ ವೀರಶೈವವನ್ನು ವೀರಶೈವರನ್ನು ಆಧುನಿಕತೆಗೆ ಅಣಿಗೊಳಿಸಿದ ಅಪೂರ್ವ ದ್ರಷ್ಟಾರರಾದ ಶ್ರೀಗಳವರಿಗೆ "ಪ್ರಜೆಗಳೇ-ವಿದ್ಯಾರ್ಥಿಗಳೇ ದೇವರು, ಸಮಾಜವೇ-ವಿದ್ಯಾಲಯವೇ ದೇವಾಲಯ. ಸಮಾಜ ಸೇವೆಯೇ-ಶಿಕ್ಷಣ ಪ್ರಸಾರವೇ ಶಿವಪೂಜೆ"ಯಾಗಿದ್ದಿತು. ಒಂದು "ಕ್ರಾಂತಿ" ಎಂದೇ ಹೇಳಬೇಕಾದ ರೀತಿಯಲ್ಲಿ ಈ ಕಾರ್ಯವನ್ನು ಪೂರೈಸಿದುದರಿಂದ "ಆಧುನಿಕ ಸಮಾಜ ಪ್ರಗತಿ ಕ್ರಾಂತಿ" ಮತ್ತು "ಆಧುನಿಕ ಶಿಕ್ಷಣ ಪ್ರಸಾರ ಕ್ರಾಂತಿ"ಗಳ ಇತಿಹಾಸದಲ್ಲಿ ಅವರ ಹೆಸರಿಗೆ ಅಗ್ರಸ್ಥಾನ ಸಲ್ಲುತ್ತದೆ.

ಇಂಥ ವಿಭೂತಿಪುರುಷನ ಕೃತಿಯನ್ನು ವೀರಶೈವ ಅಧ್ಯಯನ ಸಂಸ್ಥೆಯು ಮುಖಾಂತರ ಈ ಪುಣ್ಯಪುರುಷನನ್ನು ಕುರಿತು ಪ್ರಸ್ತುತ ಕೃತಿಯನ್ನು ಪ್ರಕಟಿಸಲು ನಮಗೆ ತುಂಬಾ ಸಂತೋಷವೆನಿಸುತ್ತದೆ. ಇಲ್ಲಿಯ ಅಭಿಪ್ರಾಯಗಳಿಗೆ ಲೇಖಕರೇ ಹೊಣೆಯೆಂದು ಬೇರೆ ಹೇಳಬೇಕಿಲ್ಲ. ನಮ್ಮ ಸಂಸ್ಥೆಯ ಮೇಲಿನ ಅಭಿಮಾನದಿಂದ ಬರೆದುಕೊಟ್ಟ ಶ್ರೀ ಈಶ್ವರಚಂದ್ರ ಚಿಂತಾಮಣಿ ಅವರಿಗೂ, ಗ್ರಂಥದಾನವನ್ನು ಪೂರೈಸಿದ ಶ್ರೀ ರಾಚಪ್ಪ ಮುರಿಗೆಪ್ಪ ಮಿಣಜಗಿ ಅವರಿಗೂ ಅಂದವಾಗಿ ಅಚ್ಚುಗೊಳಿಸಿದ ಶ್ರೀ ಫ. ಶಿ. ಭಾಂಡಗೆ ಅವರಿಗೂ ಶ್ರೀ ಯಡೆಯೂರು ಶಿವಯೋಗೀಶ್ವರ ಸನ್ಮಂಗಲವನ್ನುಂಟುಮಾಡಲೆಂದು ಹಾರೈಸುತ್ತೇವೆ.

—ಪ್ರಕಾಶಕರು

# ಅನಿಸಿಕೆ

ಬಂಥನಾಳದ ಶ್ರೀ ಸಂಗನಬಸವ ಶಿವಯೋಗಿಗಳು ವಿಜಾಪುರದ ಬೆಳಕು ಎಂದರೂ ಸರಿ. ವಿಜಾಪುರದ ಭಾಗ್ಯವೆಂದರೂ ಒಪ್ಪುವ ಮಾತಾಗಿದೆ. ಧಾರ್ಮಿಕ ಜಾಗೃತಿಯೊಂದಿಗೆ ಶೈಕ್ಷಣಿಕ ಕ್ರಾಂತಿಯನ್ನೆಸಗಿದ ಸ್ವಾತಂತ್ರ್ಯಪೂರ್ವದಲ್ಲಿಯ ಕಟ್ಟಾ ಸಮಾಜಪ್ರೇಮಿ, ನಿಷ್ಠಾವಂತ ರಾಷ್ಟ್ರಪ್ರೇಮಿ ಮೇಲಾಗಿ ಶಿಕ್ಷಣಪ್ರೇಮಿ ಶಿವಯೋಗಿಗಳವರು. ಕರ್ನಾಟಕದ ಗಾಂಧಿ ಹರ್ಡೇಕರ ಮಂಜಪ್ಪನವರ ಪ್ರೇರಣೆ, ವಚನ ಪಿತಾಮಹ ಫ. ಗು. ಹಳಕಟ್ಟಿಯವರ ಮಾರ್ಗದರ್ಶನವನ್ನು ಮನಸಾ ಸ್ವೀಕರಿಸಿ ಸಾಧನೆಗೈದ ಸಂಗನಬಸವ ಶಿವಯೋಗಿಗಳವರು ಶಾಲೆಯಲ್ಲಿ ಕಲಿತುದು ಮುಲ್ಕಿಪರೀಕ್ಷೆಯ ವರೆಗೆ ಮಾತ್ರ. ಹದಿನಾರರ ಹೊಸ್ತಿಲದಲ್ಲಿರುವಾಗಲೇ ಬಂಥನಾಳ ಪೀಠವನ್ನು ಏರಿದ ಅವರು ಅಂದಿನ ಹಿರಿಯರ ಒಡನಾಟದಿಂದ, ಭಕ್ತರ ಸಾಮೀಪ್ಯದಿಂದ, ಶರಣರ ಸಾನ್ನಿಧ್ಯದಿಂದ ಲೋಕಾನುಭವ ಸಂಪಾದಿಸಿದುದು ಅಪೂರ್ವ ಹಾಗೂ ಚಿರಸ್ಮರಣೀಯ. ಅವರಲ್ಲಿಯ ಚಾಕಚಕ್ಯತೆ, ಲೋಕಾನುಭವ, ಕಾರ್ಯತತ್ಪರತೆಗಳು ಜಿಪುಣರಲ್ಲಿ ಔದಾರ್ಯವನ್ನು, ವಿದ್ಯಾರ್ಥಿಗಳಲ್ಲಿ ಸ್ಫೂರ್ತಿಯನ್ನು, ಸಮಾಜ ಬಾಂಧವರಲ್ಲಿ ಐಕ್ಯವನ್ನು ಪ್ರೇರಣೆಯನ್ನುಂಟು ಮಾಡಿದವು. ತಮ್ಮ ಸತ್‌ಸಂಕಲ್ಪ ಈಡೇರಿಸಲು ಗ್ರಾಮೀಣ ಭಕ್ತರನ್ನೇ ಶ್ರೀಗಳವರು ನೆರೆನಂಬಿ ಜಯಶೀಲರಾದುದು ಜಿಲ್ಲೆಯ ಸಮಕಾಲೀನ ವ್ಯಕ್ತಿಗಳಿಗೆಲ್ಲ ಇಂದಿಗೂ

ಸ್ಫೂರ್ತಿದಾಯಕ. ಪ್ರಾತಃಸ್ಮರಣೀಯರಾದ ಈ ಪುಣ್ಯಾತ್ಮರ ಕಿರು ಪರಿಚಯ ಮಾಡಿಕೊಡಲು ನಾನಿಲ್ಲಿ ಪ್ರಯತ್ನಿಸಿದ್ದೇನೆ.

ಈ ಕೃತಿ ರಚನೆಗೆ ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ವೀರಶೈವ ಅಧ್ಯಯನ ಸಂಸ್ಥೆಯ ಪ್ರಕಾಶಕರು ಕಾರಣಕರ್ತರು. ಈ ಕಾರ್ಯ ಕೈಕೊಂಡ ಪೂಜ್ಯರಾದ ತೋಂಟದಾರ್ಯ ಜಗದ್ಗುರುಗಳವರ ಸನ್ನಿಧಾನದಲ್ಲಿ ಅನಂತ ಪ್ರಣಾಮಗಳನ್ನರ್ಪಿಸುವೆ. ಕೃತಿ ರಚನೆಯ ಕಾರ್ಯದಲ್ಲಿ ನೆರವಾದ ಕುಮಾರ ಮಹೇಶನ ಅಳಿಲು ಸೇವೆ ಶ್ರೀಗಳವರ ಪಾದಕ್ಕೆ ಸಮರ್ಪಿತ.

ವಿಜಾಪುರ — ಈಶ್ವರಚಂದ್ರ ಚಿಂತಾಮಣಿ

೫-೧೨-೧೯೮೦



ಲಿಂ. ಶ್ರೀ ಬಂಥನಾಳ ಶಿವಯೋಗಿಗಳು

೧೯೦೦-೧೯೭೨

# ಮಸೂತಿಯಲ್ಲಿ ಮಹಾಪುರುಷನ ಉದಯ

ವಿಶ್ವವಿಭೂತಿ ಬಸವಣ್ಣನವರನ್ನು ವಿಶ್ವಕ್ಕೆ ನೀಡಿದ ಪುಣ್ಯ ಭೂಮಿ ವಿಜಾಪುರ ಜಿಲ್ಲೆ. ಈ ಶ್ರೇಯೋಭೂಮಿಯಲ್ಲಿ ಶರಣವರೇಣ್ಯರು, ಕವಿಪುಂಗವರು, ಸಂಶೋಧಕರು, ಸಾಹಿತಿಗಳು, ಕರ್ಮಯೋಗಿಗಳು ಕಾಲಕಾಲಕ್ಕೆ ಉದಯಿಸಿ ನಾಡಿನ ಬೆಳಕಾಗಿ, ಸಮಾಜದ ಕಣ್ಣಾಗಿ ನಿಂತಿರುವರು. ಇಂಥ ಪುಣ್ಯ ಪುರುಷರ ಮಾಲಿಕೆಯಲ್ಲಿ ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಮೂಡಿಬಂದ ಮಹಾನುಭಾವರು ಬಂಥನಾಳ ಸಂಗನಬಸವ ಶಿವಯೋಗಿಗಳೊಬ್ಬರು. ರಚನಾತ್ಮಕ ಕಾರ್ಯ ಕ್ಷೇತ್ರದಲ್ಲಿ ಇವರ ಸ್ಥಾನ ಮಾನ ಹಿರಿದಾದುದು; ದಿನ ದಿನಕೆ ಪ್ರಜ್ವಲಿಸುತ್ತಿರುವದು.

ಬಸವನ ಬಾಗೇವಾಡಿ ತಾಲೂಕಿನ ಮಸೂತಿ ಗ್ರಾಮ ಶರಣ ಸಂತಾನದ ಪವಿತ್ರ ತಾಣ. ಮಸೂತಿ ಗ್ರಾಮದ ಶರಣರಾದ ಪರೂತಯ್ಯನವರು ಸದಾಚಾರ ಸಂಪನ್ನತೆಯಿಂದ ಜನಪ್ರಿಯ ವ್ಯಕ್ತಿ. ಇವರ ಧರ್ಮ ಪತ್ನಿ ಗೌರಾಂಬೆ. ಶುದ್ಧ ಜೀವನದ ಈ ದಂಪತಿಗಳಿಗೆ ನಾಲ್ವರು ಮಕ್ಕಳು. ಸಿರಿವಂತರಲ್ಲ; ಹೊಟ್ಟೆ ಬಟ್ಟೆಗೆ ಕೊರತೆಯೂ ಇಲ್ಲ. ಹೃದಯ ಶ್ರೀಮಂತಿಕೆಯಿಂದ ನಾಲ್ಕು ಜನಕ್ಕೆ ಬೇಕಾದವರಿವರು. ಮನೆತನದ ಕುಲದೇವ ಸಂಗನಬಸವ. ಶ್ರೀ ಗುರುವಿನ ದಯದಿಂದ ಅವರ

ಬಾಳೊಂದು ಬಂಗಾರ; ಸುಖ ದುಃಖ ಸರಿಸಮವಾಗಿ ಬಾಳುವೆ ಘಮಘಮ.

ಗೌರಾಂಬೆ ಗರ್ಭಿಣಿ. ಇದು ಐದನೆಯ ಫಲ ಅವಳಿಗೆ. ಆದರೆ ಈ ಸಲದ ಗರ್ಭಧಾರಣೆಯ ನಂತರ ಅವಳಿಗೆ ಹಿಂದಿನಂತೆ ಸೊಗಸಿರಲಿಲ್ಲ. ಬಂದುದೆಲ್ಲವನ್ನು ಶಿವಪ್ರಸಾದವೆಂದು ಎದುರಿಸುವ ಕುಟುಂಬಕ್ಕೆ ವಿವಂಚನೆಯಾಯಿತು. ನೋವು ನರಳಿಕೆಯಲ್ಲಿಯೇ ನವಮಾಸಗಳು ಉರುಳಿದವು. ವಿಚಿತ್ರವೆಂದರೆ ಬೆಳೆದ ಗರ್ಭ ಕರಗತೊಡಗಿತು! ಆಂದಿನ ಕಾಲದಲ್ಲಿ ವೈದ್ಯಕೀಯ ಸೌಕರ್ಯಗಳೂ ಲಭ್ಯವಿರಲಿಲ್ಲ. ಹದಿನೆಂಟು ತಿಂಗಳ ನಂತರ ಮತ್ತೆ ಗರ್ಭದ ಬೆಳವಣಿಗೆ ಪ್ರಾರಂಭ. ವಿಚಿತ್ರ ಅನುಭವಗಳು ಅವಳನ್ನು ಕಾಡಿದವು. 'ಈ ಶಿವ ಪ್ರಸಾದ ವಿಷವಾದರೂ ಸರಿಯೆ, ಅಮೃತವಾದರೂ ಸರಿಯೆ! ಬಂದುದನ್ನು ಸಂತೋಷದಿಂದ ಎದುರಿಸೋಣ!' ಎಂದು ಪರೂತಯ್ಯ ಗೌರಾಂಬೆ ದಂಪತಿಗಳು ಧೈರ್ಯ ತಂದುಕೊಂಡರು.

ಇಪ್ಪತ್ತೇಳು ತಿಂಗಳು ತುಂಬುತ್ತ ಬಂದ ಸಮಯ. ಅಂದು ಮಂಗಳವಾರ; ೧೯೦೦ ನೆಯ ಇಸ್ವಿ ಜುಲೈ ತಿಂಗಳ ೨೭ ನೆಯ ದಿನ. ಸುಪ್ರಭಾತ ಸಮಯ. ಸಾಧ್ವಿನ ಗೌರಾಂಬೆಯ ಪುಣ್ಯ ಉದರದಿಂದ ಗಂಡು ಮಗುವಿನ ಜನನ. ಈ ಪುಣ್ಯ ಶಿಶುವಿನ ಜನನಕ್ಕಾಗಿ ತಾಯಿ ಗೌರಾಂಬೆ ಮೂರೊಂಭತ್ತು ತಿಂಗಳ ಮೌನವೇದನೆಯ ಅವಿರಳ ಅನುಷ್ಠಾನ ಗೈದುದೊಂದು ವಿಶೇಷವಲ್ಲವೇ? ಈ ಭಾಗ್ಯವಂತ ಮಗುವೇ ಕಥಾ ನಾಯಕ ಬಂಥನಾಳದ ಶ್ರೀ ಸಂಗನ ಬಸವ ಶಿವಯೋಗಿಗಳು.

# ಬೆಳೆಯು ಸಿರಿ ಮೊಳಕೆಯಲ್ಲಿ

ಪರೂತಯ್ಯನವರ ಕುಲದೇವರು ಸಂಗನಬಸವೇಶ್ವರ. ಅವರ ತಂದೆಯ ಹೆಸರೂ ಅದೇ ಕುಲದೇವರದು. ಮೇಲಾಗಿ ಗೌರಾಂಬೆಯ ತಂದೆಯ ಹೆಸರಾದರೂ ಆಲಮಟ್ಟಿ ಸಂಗನ ಬಸವಯ್ಯ. ಅಜ್ಜಿ ಚಿನ್ನಮ್ಮ ಅವರು ಹಿರಿಹಿರಿ ಹಿಗ್ಗಿದರು. ಮಗ ಪರೂತಯ್ಯನಿಗೆ ಆಜ್ಞಾಪಿಸಿದರು: 'ಮುದುಕಯ್ಯ ಹುಟ್ಟಿ ಬಂದಾನ ಅದೇ ಹೆಸರು ಒಪ್ಪತೈತಿ!' ಸರಿ. ಮಗುವಿಗೆ ಸಂಭ್ರಮದಿಂದ 'ಸಂಗನಬಸವ'ನೆಂದು ನಾ ಮ ಕ ರ ಣ ವಾಯಿತು. ಭಕ್ತಿ, ಜ್ಞಾನ, ವೈರಾಗ್ಯಗಳ ಸಮನ್ವಯದ ಸಂಕೇತವೆಂಬಂತೆ ಹಸುಗೂಸು ಕಂಗೊಳಿಸಿತು. 'ನನ್ನ ಮುದ್ದು ಮುದುಕಯ್ಯ' ಎಂದು ಅಜ್ಜಿ ಜೋಗುಳ ಹಾಡಿ ಆನಂದಪಟ್ಟಳು.

ಬಾಲಕ ಸಂಗನಬಸವನು ಆಡಿದ ಆಟ, ಮಾಡಿದ ಮಾಟಗಳನ್ನು ಅಂದು ಪ್ರತ್ಯಕ್ಷ ಕಂಡುಂಡು ಅನುಭವಿಸಿದ ಸಮಕಾಲೀನ ಸ್ನೇಹಿತರು, ಬಂಧುಗಳು ಹೇಳುವ ಸ್ವಾನುಭವದ ರಸನಿಮಿಷಗಳು ವಿಪುಲವಾಗಿ ಈಗಲೂ ಮಸೂತಿಯ ಸುತ್ತು ಮುತ್ತಲು ಕೇಳಿಬರುತ್ತಿವೆ.

ಬೆಳೆಯು ಸಿರಿಯನ್ನು ಮೊಳಕೆಯಲ್ಲಿ ನೋಡಬಹುದು. ಮೂರನೆಯ ವಯಸ್ಸಿನಲ್ಲಿಯೆ ಬಾಲ ಸಂಗನಬಸವನ ಆಸ್ಖಲಿತ ವಾದ ಮುದ್ದಾದ ನುಡಿಮುತ್ತುಗಳು ಮನೆಯವರಿಗೆ ಮೋಹಕ; ಓಣಿಯ ಹಿರಿಕಿರಿಯರಿಗೆಲ್ಲ ಅಚ್ಚುಮೆಚ್ಚು,

ಸತ್ಪುರುಷರ ಶರಣರ ಪುಣ್ಯ ಚರಿತೆಗಳನ್ನು ಪ್ರತಿ ಶ್ರಾವಣ ಮಾಸದಲ್ಲಿ ತಪ್ಪದೆ ಕೇಳುತ್ತಿದ್ದ ಅಂದಿನ ಮಸೂತಿಯ ಜನ ಸಾಮಾನ್ಯರಿಗೆ ಬಾಲ ಸಂಗನಬಸವನು ಮಸೂತಿಯ ಮಹಾ ಬೆಳಕಾಗಬಹುದೆಂಬ ಆಶಾಕಿರಣ ಹುಸಿಯಾಗಲಿಲ್ಲ. ಅಂದಿನ ಕಿರಣ ಮುಂದೆ ಜಿಲ್ಲೆಯ ತುಂಬಾ ಪ್ರಕಾಶವನ್ನು ಬೀರಿ ಜ್ಞಾನ ಜ್ಯೋತಿಯನ್ನು ಶಾಶ್ವತಗೊಳಿಸಿತು.

ಬಾಲಕ ಸಂಗನಬಸವ ಐದನೆಯ ವಯಸ್ಸಿನಲ್ಲಿ ಪ್ರಾಥಮಿಕ ಶಾಲೆಯಲ್ಲಿ ಪಾದಾರ್ಪಣ ಮಾಡಿದ ಸಮಯ. ಆತನ ಪ್ರವೃತ್ತಿ ಚಂಚಲ. ಮನೆಯಲ್ಲಿ ಪೂಜೆ–ಪುರಸ್ಕಾರಗಳು ಎಳೆತನದಲ್ಲಿ ಸತ್‌ಸಂಪ್ರದಾಯ ರೂಢಿಸಿದವು. ಬೆಳಿಗ್ಗೆ ಏಕಾಕಿಯಾಗಿ ಮೂಲೆಯಲ್ಲಿ ಕೂಡ್ರುವ ಸ್ವಭಾವ. ಶಾಲೆಯಲ್ಲಿ ಓರಿಗೆಯ ಹುಡುಗರೊಂದಿಗೆ ಆಟ-ಪಾಠ, ತಂಟೆ-ತಕರಾರು ಅವನ ದಿನಚರಿ. ಕಂಠಪಾಠದಲ್ಲಿ ಅವನದೇ ಮೇಲುಗೈ ಎಲ್ಲದರಲ್ಲೂ ಹಿರಿಮಣಿ ತಾನಾಗಬೇಕೆಂಬ ಛಲ ಮತ್ತು ಸ್ವಪ್ರಯತ್ನ. ಸ್ವಾಭಿಮಾನಕ್ಕೆ ಧಕ್ಕೆಯಾದರೆ ತೀರಿತು ಸೇರಿಗೆ ಸವ್ವಾಸೇರು ಮಾಡುವವ.

ಕೈ. ವಾ. ಬೇವನೂರ ವಕೀಲರು ಸಂಗನಬಸವನ ಸಹಪಾಠಿ. ಅವರು ತಮ್ಮ ಸ್ವಾನುಭವವನ್ನು ಹೀಗೆ ಹೇಳಿದ್ದುಂಟು:

ಸಂಗನಬಸವನನ್ನು ನಾವೆಲ್ಲರೂ ಮುದುಕಯ್ಯನೆಂದೇ ಕರೆಯುತ್ತಿದ್ದೆವು. ಅವನು ನಮ್ಮೆಲ್ಲರ ಹಿರಿಮಣಿ. ಕ್ರಾಂತಿಕಾರಕ ವಿಚಾರ ಸರಣಿ. ಉಡಾಳನಂತೆ ಕಂಡರೂ ಉದಾತ್ತ

ಗುಣಗಳ ಖಣಿಯಾತ. ತಂಟೆ ತೆಗೆಯುತ್ತಿರಲಿಲ್ಲ. ಆದರೆ ತಂಟೆ ತೆಗೆದವರನ್ನು ಬಿಡುತ್ತಿರಲಿಲ್ಲ. ಅದು ಡೋಣಿ ಪಾಲಿನವರಾದ ನಮ್ಮ ರಕ್ತದ ಗುಣ ವಿಶೇಷ. ಪೌರಾಣಿಕ ಕತೆ ಕೇಳಬಂದು ನಮ್ಮೆಲ್ಲ ಗೆಳೆಯರಿಗೆ ಬಣ್ಣಿಸಿ ಹೇಳುತ್ತಿದ್ದ. ಸಹ ಜೀವನವೆಂದರೆ ಅವನಿಗೆ ಒಲು ಹಿಗ್ಗು. ಕೂಡಿ ಉಣ್ಣು ವದು, ಉಣಿಸುವದು, ಆಡುವದು ಮುದುಕಯ್ಯನಲ್ಲಿದ ವಿಶೇಷ ಗುಣ. ಶಾಲೆಯಲ್ಲಿ ಅವನಿಗೇ ಒಂದನೆ ನಂಬರು ಮೀಸಲಾಗಿರುತ್ತಿತ್ತು. ಅವನ ಸ್ಮರಣ ಶಕ್ತಿಗೆ ಮಾಸ್ತರರ್ದ ಸಹ ಗಾಬರಿಯಾಗುತ್ತಿದ್ದರು. ಅಂತೆಯೇ ಜಿಲ್ಲೆಯ ಜ್ಯೋತಿ ಆದರು.,

೧೯೧೦ ರಲ್ಲಿ ಉಕ್ಕಲಿಯ ಪ್ರಾಥಮಿಕ ಶಾಲೆಯಲ್ಲಿ ಸಂಗನಬಸವನು ಓದುತ್ತಿದ್ದ. ಶಾಲೆಯಲ್ಲಿ ಎಲ್ಲರಿಗೂ ಅಚ್ಚು ಮೆಚ್ಚಿನ ವಿದ್ಯಾರ್ಥಿ. ಮುಸಬಿನಾಳ ಎಂಬುದು ನೆರೆಯ ಹಳ್ಳಿ. ಅಲ್ಲಿಯ ಗೌರಿ ಜಾತ್ರೆ ತುಂಬಾ ಪ್ರಸಿದ್ಧ. ಆ ವರುಷ ಗೌರಿ ಜಾತ್ರೆಗೆ ಮುಸಬಿನಾಳದ ರಸಿಕ ಯುವಕರು 'ಸತ್ಯ ಹರಿಶ್ಚಂದ್ರ' ನಾಟಕ ಅಭಿನಯಿಸಲು ಮೂರು ತಿಂಗಳಿಂದ ಜೋರಾಗಿ ಪೂರ್ವ ಸಿದ್ಧತೆ ಮಾಡುತ್ತ ಬಂದಿದ್ದರು.

ನಾಟಕದಲ್ಲಿ 'ತಾರಾಮತಿ'ಯದು ಪ್ರಮುಖ ಪಾತ್ರ. ಮುಸಬಿನಾಳ ಗ್ರಾಮದ ಸುಂದರ ಹುಡುಗನೊಬ್ಬನು ತಾರಾ ಮತಿಯಾಗಿ ಅಭಿನಯಿಸಲು ಭರ್ಜರಿ ಸಿದ್ಧತೆ ಮಾಡಿ ಕೊಂಡಿದ್ದ. ಅವನ ಹಾಡುಗಾರಿಕೆ, ಮಾತಿನ ವೈಖರಿಗೆ ಎಲ್ಲರೂ ಬೆನ್ನುತಟ್ಟುವರು. ಹೀಗಾಗಿ 'ನಾನೇ ಶ್ರೇಷ್ಠ'

ನನ್ನಿಂದಲೇ ನಾಟಕ’ ಎಂಬ ಅಹಂಭಾವ ಹುಡುಗನಲ್ಲಿ ಉಕ್ಕಿ ಬಂದಿತು. ಅವನ ಬಿಂಕ ಪಾತ್ರಧಾರಿಗಳ ಅಂತಃಕಲಹಕ್ಕೆ ನಾಂದಿಯಾಗಬೇಕೆ? ಮಾತಿಗೆ ಮಾತು ಬೆಳೆದು ಗೌರಿ ಜಾತ್ರೆ ನಾಲ್ಕೇ ದಿನ ಉಳಿದಿರುವಾಗ ತಾರಾಮತಿಯ ಪಾತ್ರಧಾರಿ ಊರು ಬಿಟ್ಟು ಓಡಿ ಹೋದ. ಎಲ್ಲಿ ಹುಡುಕಿದರೂ ಸಿಕ್ಕಲಿಲ್ಲ. ಮಸಬಿನಾಳದ ಹಿರಿಯರಿಗೆಲ್ಲ ದೊಡ್ಡ ಚಿಂತೆ! ಜಾತ್ರೆಯ ದಿನ ನಾಟಕ ಅಭಿನಯಿಸುವ ಕರ ಪತ್ರಗಳನ್ನು ಸುತ್ತಲೂ ಹಂಚಿಯಾಗಿದೆ; ನಾಟಕ ಆಡದಿದ್ದರೆ ಊರಿಗೇ ಅವಮಾನ! ಈ ಸುದ್ದಿ ಉಕ್ಕಲಿಯ ಶಾಲೆಯ ಹೆಡ್‌ಮಾಸ್ತರರಿಗೂ ತಿಳಿಯಿತು. ಆಪ್ತಾಲೋಚನೆಗೆಂದು ಮಸಬಿನಾಳ ಶಾಲೆಯ ಮಾಸ್ತರರೂ ಬಂದರು. ನಾಲ್ಕು ದಿನಗಳಲ್ಲಿ ತಾರಾಮತಿಯ ದೊಡ್ಡ ಪಾತ್ರ ಅಭಿನಯಿಸಲು ಯಾರಿಂದ ತಾನೇ ಸಾಧ್ಯ? ನಾಟಕ ಕಲಿಸುವ ಮಾಸ್ತರರು ಅಭಿನಯಿಸಬಹುದಿತ್ತು. ಆದರೆ ಅವರು ವಯೋವೃದ್ಧರು! ಕೊನೆಗೆ ಹಿರಿಯರೆಲ್ಲರೂ ಬಿನ್ನವಿಸಿದಾಗ ಬಾಲಕ ಸಂಗನಬಸವನು ಒಪ್ಪಿಕೊಂಡ.

ತಾರಾಮತಿಯ ಸುಮಾರು ಎರಡುನೂರ ಐವತ್ತು ಮಾತುಗಳನ್ನು ಮೂರು ದಿನಗಳಲ್ಲಿ ಕಂಠಪಾಠ ಮಾಡಿದ. ಹತ್ತಾರು ಹಾಡುಗಳನ್ನು ಸರಾಗವಾಗಿ ಹಾಡಲು ರೂಢಿ ಮಾಡಿದ. ಈ ವಾರ್ತೆ ಸುತ್ತಲೂ ಹಬ್ಬಿತು. ನಾಲ್ಕನೆಯ ದಿನ ರಂಗಭೂಮಿಯ ಮೇಲೆ ಸಂಗನಬಸವ ‘ತಾರಾಮತಿ’ಯಾಗಿ ಅತ್ಯಂತ ನಿಷ್ಠೆಯಿಂದ ಅಭಿನಯಿಸಿದ. ಸಾವಿರಾರು ಜನರು ಈ ಬಾಲಕನ ಕಂಠಶ್ರೀಗೆ, ಅಸ್ಖಲಿತವಾಣಿಗೆ,

ಪರಿಣಾಮಕಾರಿ ಅಭಿನಯಕ್ಕೆ ತಲೆದೂಗಿದರು. 'ನಮ್ಮ ಊರಿನ ಮರ್ಯಾದೆ ಕಾಪಾಡಿದ ಈ ಸಂಗನಬಸವ. ಮೂರ್ತಿ ಚಿಕ್ಕದಾದರೇನು ಈತನ ಆತ್ಮಶ್ರೀ ಅಗಾಧವಾಗಿದೆ' ಎಂದು ನಾಟಕ ನೋಡಿ ಉಚಿತ ಕಾಣಿಕೆ ನೀಡಿದ ಗ್ರಾಮದ ಶರಣ ರೊಬ್ಬರು ಮುಕ್ತ ಕಂಠದಿಂದ ಕೊಂಡಾಡಿದರು.

# ಸ್ವಾಭಿಮಾನಿ ಸಂಗನಬಸವ

ಸ್ವಪ್ರತಿಭೆಯಿಂದ ಮಸೂತಿಯ ಸುತ್ತಲಿನ ಹಳ್ಳಿಗಳಲ್ಲಿ ಮನೆಮಾತಾಗಿದ್ದ ಮುದ್ದು ಮುದುಕಯ್ಯ ಎಳೆಯ ಸಂಗನ ಬಸವ ೧೯೧೨ರಲ್ಲಿ ಮುಲ್ಕೀ ಪರೀಕ್ಷೆಯಲ್ಲಿ ಉಚ್ಚ ತರಗತಿ ಯೊಂದಿಗೆ ಉತ್ತೀರ್ಣನಾದ. ರೂಪಗುಣಗಳಿಂದ ಅಪೂರ್ವ ವಾದ ಸ್ಮರಣಶಕ್ತಿಯಿಂದ ಉತ್ಸಾಹ ಮೂರ್ತಿಯಾಗಿ ಕಣ್ಮನ ಸೆಳೆಯುವ ಈ ಬಾಲಕನನ್ನು ಯರನಾಳ ವಿರಕ್ತಮಠದ ತಪೋನಿಧಿ ಶ್ರೀ ಪಂಪಾಪತಿಗಳು ಬರಮಾಡಿಕೊಂಡರು. ಅವರು ತ್ರಿಕಾಲ ಜ್ಞಾನಿಗಳು. ಸಂಗನಬಸವನ ತೇಜಸ್ಸನ್ನು ಗುರುತಿಸಿದ ಅವರು ಇಂಗ್ಲೀಷ ಕಲಿಸಲು ಏರ್ಪಾಡು ಮಾಡಿ ದರು. ಹುಡುಗ ಇಂಗ್ಲೀಷ ಕಲಿಯಲು ನಿರಾಕರಿಸಿದ. ಮೂರ್ನಾಲ್ಕು ಬಾರಿ ಪ್ರಯತ್ನಿಸಿದರೂ ಅಡೆತಡೆ ಆತಂಕಗಳು ಎದುರಾದವು ಸಂಗನಬಸವನಲ್ಲಿಯ ಆಧ್ಯಾತ್ಮದ ಹಸಿವು, ಸಾಧನೆಯತ್ತ ಒಲವು, ಅವನ ಆತ್ಮತೇಜದ ಹೊಳಪು, ಬೇರೆ ಏನನ್ನೋ ಬಯಸುತ್ತಿರುವುದು ಯತಿಗಳಿಗೆ ಹೊಳೆಯ ದಿರಲಿಲ್ಲ.

'ಮಗೂ, ನಿನಗೆ ನೀನೇ ಗುರುವು. ಸಕಲವನ್ನು ಸ್ವಯಂ ಸಿದ್ಧನಾಗಿ ಅರಗಿಸಿಕೊಂಡು ಮುನ್ನಡೆಯಬಲ್ಲ ಪ್ರಸಾದ ಕಾಯ, ಪ್ರಾಸಾದಿಕ ವಾಣಿ ನಿನ್ನದಾಗಿದೆ. ನೀನು ಸದ್ಗುರು, ಚಿದ್ಗುರು; ಸ್ವಯಂಭೂ. ನನ್ನ ಸಕಲ ಶಕ್ತಿ ನಿನ್ನೊಡಗೂಡಿ

ಾರ್ಯರ್ಗೈಯ್ಯುವದು.' ಎಂದು ಶುಭಾಶೀರ್ವಾದ ಅನುಗ್ರ
ಿಸಿದರು.

ಪಂಪಾಪತಿಗಳು ಸಂಗನಬಸವನ ಕಕ್ಕಂದಿರು. ತಮ್ಮ ಂಶದ ಕುಡಿಯ ದಿವ್ಯ ತೇಜ ಕಂಡು ಅವರಿಗೆ ಅತ್ಯಾನಂದ. ಮ್ಮ ಮಠಕ್ಕೆ ಉತ್ತರಾಧಿಕಾರಿಯೊಬ್ಬನನ್ನು ಅವರು ರಸುತ್ತಿದ್ದ ಸಮಯವದು. ಅರಸುತಿಹ ಲತೆ ಕಾಲ ೊಡಕಿದಂತಾಯಿತು. ಸಂಗನಬಸವನನ್ನು ಉತ್ತರಾಧಿಕಾರಿ ಂದು ಸ್ವೀಕರಿಸಲು ಅವರು ಮುಂದಾದರು. ಆದರೆ ಬಾಲಕ ಲ್ಲೆನೆಂದು ಹಟ ಹಿಡಿದ! ಯರನಾಳದ ಹಿರಿಯರು. ತಾಯಿ ತಂದೆ. ಬಂಧು ಬಳಗ ಎಲ್ಲರೂ ಸೇರಿ ಸಂಗನಬಸವನನ್ನು ಒತ್ತಾಯಿಸಿ ಒಪ್ಪಿಸಬೇಕಾಯಿತು.

ಪಂಪಾಪತಿಗಳು ೧೯೧೨ ಜನೇವರಿ ೩ ರಂದು ಸಂಗನ ಬಸವನಿಗೆ ಶಾಸ್ತ್ರೋಕ್ತವಾಗಿ ತಮ್ಮ ಪೀಠವನ್ನೇರಲು ಅನು ಗ್ರಹಿಸಿದರು. ಮಗುವಿನ ಮಸ್ತಕದ ಮೇಲೆ ತಮ್ಮ ಹಸ್ತ ವನ್ನಿರಿಸಿ ತಪೋಬಲ ಆತ್ಮಬಲಗಳನ್ನು ಧಾರೆ ಎರೆದರು. ಆಗ ಬಾಲಕ ಸಂಗನಬಸವನು ಅಗಾಧವಾದ-ಅಗೋಚರ ಶಕ್ತಿಗೆ ಮಂತ್ರ ಮುಗ್ಧನಾಗಿ ಆನಂದ ಪುಲಕಿತನಾದನು. ಹನ್ನೆರಡ ನೆಯ ವಯಸ್ಸಿನಲ್ಲಿಯೇ ವಿರಕ್ತಮಠದ ಪೀಠವನ್ನೇರಿದರು. ಪಂಪಾಪತಿಗಳು ಘನಲಿಂಗದಲ್ಲಿ ಸೇರಿದರು ತಮ್ಮ ಮೇಲಾದ ಶಕ್ತಿಪಾತ ಪ್ರಯೋಗದ ಅಂದಿನ ಅನುಭವವನ್ನು ಶಿವಯೋಗಿ ಗಳವರು (೧೯೬೮ ರಲ್ಲಿ) ನನ್ನ ಮುಂದೆ ಯಥಾವತ್ತಾಗಿ ಸ್ಮರಿಸಿ, ಬಣ್ಣಿಸಿದುದನ್ನೇ ನಾನಿಲ್ಲಿ ವಿವರಿಸಿದ್ದೇನೆ.

ಬಂಥನಾಳ ಶಿವಯೋಗಿಗಳವರು ಎಳೆತನದಲ್ಲಿಯ
ವ್ಯಕ್ತಿತ್ವ ಕುರಿತು ನಾನು ತಿಳಿಯಬಯಸಿದಾಗ ಬಬಲೇಶ್ವರ
ಪೂಜ್ಯ ಶಾಂತವೀರ ಮಹಾಸ್ವಾಮಿಗಳವರು (೧೪-೨-೧೯
ರಂದು) ಇಂತೆಂದರು:

'೧೯೧೨ರಲ್ಲಿ ಬಬಲೇಶ್ವರದಲ್ಲಿ ನಾನೊಂದು ಸಂಸ್ಕೃ
ಪಾಠಶಾಲೆಯನ್ನು ಆರಂಭಿಸಿದ್ದೆ. ಹಲವಾರು ಕಡೆಗಳಿಂ
ಹಲವಾರು ವಟುಗಳು ವೇದ ಉಪನಿಷತ್ತು, ಸಿದ್ಧಾಂ
ಅಧ್ಯಯನಕ್ಕಾಗಿ ಬಂದಿದ್ದರು. ಹನ್ನೆರಡು ವರುಷದ ಸಂಗ
ಬಸವ ಶಿವಯೋಗಿಗಳು ಯರನಾಳದಿಂದ ಬಂದಿದ್ದರು. ಅವ
ಸ್ಮರಣ ಶಕ್ತಿ, ಜಿಜ್ಞಾಸೆ, ಆಧ್ಯಾತ್ಮದಲ್ಲಿ ಆಸಕ್ತಿ ಅಪೂರ್ವ
ವಾಗಿತ್ತು. ಸುಮಾರು ಎರಡೂವರೆ ವರುಷ ಪಾಠಶಾ
ಯಲ್ಲಿದ್ದು ಎಲ್ಲರಿಗಿಂತ ಹೆಚ್ಚಾಗಿ ಅಭ್ಯಾಸ ಮಾಡಿ ಮುಂದ
ವರೆದರು. ಸಂಸ್ಕೃತದ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅವರಿ
ಸುವರ್ಣಪದಕ ಪ್ರಾಪ್ತವಾಯಿತು. ಅವರು ಧಾರ್ಮಿ
ಮತ್ತು ಸಾಮಾಜಿಕ ಕ್ರಾಂತಿಗೆಂದು ಹುಟ್ಟಿಬಂದ ಶರಣರೆಂಬ
ದನ್ನು ಆಗ ನನಗೂ ಮತ್ತೆ ಕೆಲವು ಹಿರಿಯರಿಗೂ ಹೊ
ಯಿತು. ಮುಂದೆ ನಮ್ಮ ಅನಿಸಿಕೆ ಈಡೇರಲು ಹೆಚ
ಸಮಯ ಬೇಕಾಗಲಿಲ್ಲ. ಅವರ ಶೈಕ್ಷಣಿಕ ಕ್ರಾಂತಿ ನವ
ಜಿಲ್ಲೆಯನ್ನು ಕತ್ತಲೆಯಿಂದ ಬೆಳಕಿಗೆ ಹುಟ್ಟಿಸಿದೆ. ಧಮ
ಜಾಗೃತಿಯೊಂದಿಗೆ ಶೈಕ್ಷಣಿಕ ಕ್ರಾಂತಿಯನ್ನು ಮನಃಪೂರ್ವ
ಮಾಡಿ ತೋರಿಸಿದ ಸಮಾಜ ಪ್ರೇಮಿ ರಾಷ್ಟ್ರಪ್ರೇಮಿ ಬಂ
ನಾಳ ಶಿವಯೋಗಿಗಳು. ಈ ಶತಮಾನದ ವಿಜಾಪುರ

ಜಯಶ್ರೀ ಎನ್ನಬಹುದು.' ಎಂದು ಮುಕ್ತ ಮನಸ್ಸಿನಿಂದ ರಿಸಿದರು. ಮತ್ತೆ ಮುಂದುವರಿದು ಶಾಂತವೀರ ಶಿವಯೋಗಿ ಳು ಅಂದಿನ ರಸ ನಿಮಿಷಗಳನ್ನು ಅರಹುತ್ತ ನಕ್ಕರು, ಗಿಸಿದರು.

'ಹುಡುಗ ಸಂಗನಬಸವ ಸ್ವಭಾವತಃ ಸ್ವಾಭಿಮಾನಿ. ಷ್ಟೇ ಹಟಮಾರಿ ವಟುಗಳಲ್ಲಿ ಒಬ್ಬಿಬ್ಬರು ಗರಡಿ ಸಾಧನೆ ುಂದ ಬಲಾಢ್ಯರಾಗಿದ್ದರು. ತಾನೂ ವ್ಯಾಯಾಮ ಮಾಡಿ ವರೊಡನೆ ಕುಸ್ತಿಗೆ ಸಿದ್ಧನಾದನು. ಅದರಲ್ಲಿಯೂ ಜಯ ಡೆದು ನಿಂತಾಗಲೇ ಅವನಿಗೆ ತೃಪ್ತಿಯಾಯಿತು. ಸಂಸ್ಕೃತ ಮರಕೋಶದ ೧೨೦ ಶ್ಲೋಕಗಳನ್ನು ಎರಡೇ ದಿನಗಳಲ್ಲಿ ಂಠಪಾಠ ಮಾಡಿದ ಸಂಗನಬಸವ ನೆರೆದ ಸಭೆಯಲ್ಲಿ ಸ್ಖಲಿತವಾಗಿ ಹೇಳಿ ನಮ್ಮೆಲ್ಲರನ್ನು ದಿಗಿಲುಗೊಳಿಸಿದ. ಡ್ಡರನ್ನು ಕಂಡರೆ ಅನುಕಂಪ, ಜಾಣರನ್ನು ಕಂಡರೆ ದುರಿಸುವ ಛಲ. ಇದು ಅಂದಿನ ಅವನ ವಿಶೇಷಗುಣ. ವನನ್ನು ಕಂಡಾಗಲೆಲ್ಲ ನನಗೂ, ಹಿರಿಯರಿಗೂ ಆದರಾಭಿ ಮಾನಗಳು ಮೂಡುತ್ತಿದ್ದವು.' ಎಂದು ಶ್ರೀಗಳು ನಕ್ಕರು.

# ಮುಳಗುಂದದಲ್ಲಿ ಮಂಗಲಾಶೀರ್ವಾದ

ಸಂಗನಬಸವ ಬಾಲ ಶಿವಯೋಗಿ, ಯರನಾಳ ಮಠದ ಪೀಠಾಧಿಪತಿಯಾಗಿ ಒಬಲೇಶ್ವರದ ಸಂಸ್ಕೃತ ಪಾಠಶಾಲೆಯಲ್ಲಿ ಓದುತ್ತಿದ್ದ ಸಮಯ. ಶಾಂತವೀರ ಸ್ವಾಮಿಗಳವರ ಹತ್ತಿರ ಸಂಗನಬಸವ ಓದುತ್ತ ಕುಳಿತಿದ್ದ. ಅಕಸ್ಮಾತ್ ಆಗಮಿಸಿದ ತಂದೆ ಪರೂತಯ್ಯನವರನ್ನು ನೋಡಿ:

'ಏನು ಸ್ವಾಮಿ ಏಕೆ ದಯಮಾಡಿಸಿದಿರಿ?' ಎಂದು ಕೇಳಿದ ಸಂಗನಬಸವ. ಪರೂತಯ್ಯನವರು ಅಚ್ಚರಿ ಆನಂದ ಗಳಿಂದ ತಬ್ಬಿಬ್ಬಾದರು.

'ಇವರು ತಂದೆ ಅಲ್ಲವೇ?' ಎಂದು ಕೇಳಿದರು. ಶಾಂತ ವೀರ ಸ್ವಾಮಿಗಳು. 'ಗುರುಗಳೇ ಪೂರ್ವಾಶ್ರಮದಲ್ಲಿಯ ಸಂಬಂಧವದು. ಈಗ ಇವರು ಇತರರಂತೆ ನನಗೆ ಹಿರಿಯರು ಮಾರ್ಗದರ್ಶಿ ಸಲಹೆಗಾರರು ಅಷ್ಟೇ!' ಎಂದ ಬಾಲ ಶಿವಯೋಗಿ.

'ಭಲೇ ಈ ಮನೋಧೈರ್ಯ ಶ್ಲಾಘನೀಯ ವಿರಕ್ತರಿಗಿದು ಭೂಷಣ!' ಎಂದು ಶಾಂತವೀರರು ಸಂಗನ ಬಸವನನ್ನು ತಬ್ಬಿಕೊಂಡರು. 'ನಾನು ಮುಳಗುಂದಕ್ಕೆ ಹೊರಟಿದ್ದೇನೆ. ಪೂಜ್ಯ ಬಾಲಲೀಲಾ ಮಹಾಂತ ಶಿವಯೋಗಿ ಗಳ ಗದ್ದುಗೆಯ ದರ್ಶನ ಪಡೆದು ಹಾಗೆಯೇ ನಿಮ್ಮ ಪೂರ್ವಾ ಶ್ರಮದ ಸಂಬಂಧವುಳ್ಳ ಅಣ್ಣನನ್ನು ಕಂಡು ಬರುವಿರಂತೆ

ನಡೆಯಿರಿ' ಎಂದರು. ಬಾಲಯೋಗಿ ಸಂಗನಬಸವನ ಜೊತೆಗೆ ಇಲು ಜೋಕೆಯಿಂದ ತೂಕದಿಂದ ವರ್ತಿಸಹತ್ತಿದರು. ತಂದೆ ಪರೂತಯ್ಯನವರು 'ಮಗನ ಅಭ್ಯುದಯ ಕಣ್ಣಾರೆ ಕಂಡಿದ್ದರೆ ತಾಯಿ ಗೌರಾಂಬೆ ಅದೆಷ್ಟು ಸಂತೋಷಪಡಬಹುದಾಗಿತ್ತೋ!' ಎಂದು ಪರೂತಯ್ಯನವರು ಶಾಂತವೀರಸ್ವಾಮಿಗಳ ಸನ್ನಿಧಿಯಲ್ಲಿ ಮರುಗಿದಾಗ ಅಲ್ಲಿಯೇ ಕುಳಿತಿದ್ದ ಸಂಗನಬಸವ ತಟ್ಟನೇ 'ಅವರು ಮರೆಯಾದರೂ ಅವರ ಚೇತನದ ಈ ಕಾರಣ ಶರೀರ ಹೊತ್ತ ನಾನು, ಅವರ ಅಕ್ಕರೆ ಆಸರೆಗಳನುಂಡು ಬೆಳೆದ ನಾನು ಮಾಡಬೇಕಾದ ಕರ್ತವ್ಯದಲ್ಲಿ ಚ್ಯುತಿ ತರದಿದ್ದರೆ ಅದುವೆ ಅವರಾತ್ಮಕ್ಕೆ ಆನಂದ ಹಾಗು ಶಾಂತಿ. ಈ ನೆಮ್ಮದಿಯು ನಿಮ್ಮದಾಗಿರಲಿ!' ಎಂದು ಸಾಂತ್ವನ ಹೇಳಿದ. ಪರೂತಯ್ಯನವರ ಹೃದಯ ತುಂಬಿ ಬಂದಿತು; ಕಂಠ ಬಿಗಿದಿತ್ತು. ಆನಂದ ಭಾಷ್ಪಗಳಿಂದ ಪತ್ನಿಯ ಸ್ಮೃತಿಯ ಸಿಂಚನವಾಯಿತು. (ಗೌರಾಂಬೆಯು ತೀರಿಕೊಂಡು ಆಗಲೆ ಎರಡು ವರ್ಷಗಳಾಗಿದ್ದವು.)

ಮುಳಗುಂದದ ಮಠಾಧಿಪತಿ ಶಿವಲಿಂಗಯ್ಯನವರು. ಇವರು ಮಸೂತಿಯ ಪರೂತಯ್ಯನವರ ಹಿರಿಯ ಪುತ್ರ. ಮುಳಗುಂದಕ್ಕೆ ಬರುತ್ತಲೆ ಹಾರ್ದಿಕ ಸ್ವಾಗತ ದೊರೆಯಿತು. ಸಂಗನಬಸವ ಶಿವಯೋಗಿ ಗದ್ದುಗೆಯ ದರ್ಶನ ಪಡೆದು 'ಜೋಕೆ ಕಂಡ್ಯಾ ಆತ್ಮಾ ಜೋಕೆ....' ಎಂಬ ಬಾಲಲೀಲಾ ಮಹಾಂತ ಶಿವಯೋಗಿಗಳು ರಚಿಸಿದ ಗೀತವನ್ನು ಭಾವಪರವಶತೆಯಿಂದ ಹಾಡಿದ. ಅಲ್ಲಿ ನೆರೆದ ಭಕ್ತರು ಮಂತ್ರ ಮುಗ್ಧ

ರಾಗಿ ಆಲಿಸಿದರು.'ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ' ಮಂಗಲ ಗೀತ ಕೇಳಿ ಬಾಲ ಶಿವಯೋಗಿ ಇವನಾರೆಂದು ಎಲ್ಲರೂ ನಮಸ್ಕರಿಸಿ ಕೇಳಿದರು.

ಮಠದ ಆವಾರದ ಮೂಲೆಯಲ್ಲಿ ಅಂತರ್ಮುಖಿಯಾಗಿ ಕುಳಿತಿದ್ದ ಒಬ್ಬ ವಯೋವೃದ್ಧ ಶರಣನು ಸಂಗನಬಸವನನ್ನು ನೋಡುತ್ತ ಬಂದು ಅತ್ಯಾನಂದದಿಂದ ಮುಂದೆ ಕರೆದು:

'ಬಾಲ ಶಿವಯೋಗಿಗಳೇ ನಿಮ್ಮ ದರ್ಶನದಿಂದ ನಾನು ಧನ್ಯ. ನೀವೊಬ್ಬ ದ್ರಷ್ಟಾರರಾಗುವಿರಿ. ಬಾಲಲೀಲಾ ಮಹಾಂತ ಶಿವಯೋಗಿಗಳ ಗುಪ್ತ ಸನ್ನಿಧಾನದಲ್ಲಿ ಕಾಲಜ್ಞಾನ ಸೂಚಿಸುವೆ. ತಿಂಗಳೊಪ್ಪತ್ತಿನಲ್ಲಿಯೇ ಮಹಾಪೀಠದ ಉತ್ತರಾಧಿಕಾರಿಯಾಗುವ ಭಾಗ್ಯ ನಿಮ್ಮದಾಗಲಿದೆ ! ಶಿವಯೋಗಿಯಾಗಿ ಸಮಾಜ ಕಲ್ಯಾಣ ಗೈವ ದೈವೀ ಅನುಗ್ರಹ ನಿಮ್ಮ ಹಿಂದೆ ಇದೆ. ನಿಮ್ಮ ರಚನಾತ್ಮಕ ಕಾರ್ಯಗಳಲ್ಲಿ ಯಶವುಂಟು, ಫಲವುಂಟು. ಯಾವ ಶಕ್ತಿಯೂ ಅದನ್ನು ತಡೆಯಲಾರದು! ಆದರೆ ಆದರೆ.... ಈ ಮಠದ ಅಧಿಪತಿಯಾದ ನಿಮ್ಮಣ್ಣನು ಹೆಸರಿಗೆ ವಿರಕ್ತ; ಎಲ್ಲ ಭೋಗಾದಿಗಳಲ್ಲಿಯೂ ಆಸಕ್ತ! ಈ ಪುಣ್ಯ ಪೀಠದಿಂದ ಅವರು ಕಾಲ್ದೆಗೆಯುವದು ಒಳ್ಳೆಯದು!' ಹೀಗೆಂದು ಆ ಶರಣನು ಶರಣು ಶರಣೆಂದು ನಮಿಸುತ್ತ ಅಲ್ಲಿ ನಿಲ್ಲದೆ ಹೊರಟು ಹೋದ. ಸಂಗನಬಸವ ಮುಗ್ಧನಾಗಿ ಅವರನ್ನೇ ನೋಡಿದ.

ಈ ಕೌತುಕದ ಕಾಲಜ್ಞಾನ ಸೂಚನೆ ಸುತ್ತಲೂ ಪಸರಿಸಿತು. ಮುಳಗುಂದ ಮಠದ ಪೀಠಾಧಿಪತಿ ಶಿವಲಿಂಗಯ್ಯ

ಮರಳಿ ಮಸೂತಿಗೆ ಬಂದು ಪ್ರಾಪಂಚಿಕನಾದ. ಬಾಲ ಸಂಗನಬಸವ ಶಿವಯೋಗಿ ಯರನಾಳ ಮಠದ ಜ್ಯೋತಿಯಾಗಿ ಎಲ್ಲರ ಮನಸು ಸೂರೆಗೊಂಡ. ಆದರೆ ಮುಳಗುಂದದ ಮಂಗಲಾಶೀರ್ವಾದ ಸೂಚನೆ (ಕಾಲಜ್ಞಾನ) ಯರನಾಳದಿಂದ ಬಂಥನಾಳದ ಭಾಗ್ಯ ಪೀಠಕ್ಕೆ ಈ ಬಾಲಶಿವಯೋಗಿ ಸಾಗುವಂತೆ ಪ್ರೇರೇಪಿಸಿತು.

# ಬಂಥನಾಳದ ಭಾಗ್ಯ

ಪರೂತಯ್ಯನವರ ತಾಯಿ ಚೆನ್ನಮ್ಮ. ಅವಳ ಸೋದರಳಿಯ ಚೆನ್ನಬಸವಸ್ವಾಮಿ ಇಂಡಿ ತಾಲೂಕಿನ ಮಸಳಿ ಗ್ರಾಮದ ಹಿರೇಮಠದ ವಂಶಜರು. ಅವರು ಸುಕ್ಷೇತ್ರ ಬಂಥನಾಳ ಮಠದ ಅಧಿಪತಿಗಳಾಗಿದ್ದರು. ಬಾಲಶಿವಯೋಗಿ ಸಂಗನಬಸವನಲ್ಲಿಯ ಗುಪ್ತವಾದ ದಿವ್ಯವಾದ ದೈವೀ ಶಕ್ತಿಯನ್ನು ಅವರು ಕಂಡುಕೊಂಡಿದ್ದರು. ಅವನ ಅಭ್ಯುದಯಕ್ಕಾಗಿ ಅವರು ಸತ್‌ಸಂಕಲ್ಪ ಮಾಡಿದ್ದರೆಂದೂ ಅವರ ಸಂಕಲ್ಪದಂತೆ ಎಲ್ಲವೂ ಜಯಪ್ರದವಾಗಿ ನಡೆಯಿತೆಂದೂ ಸಮಕಾಲೀನ ಹಿರಿಯರ ಹೇಳಿಕೆ.

ಯರನಾಳಮಠದಲ್ಲಿ ಧ್ಯಾನಾಸಕ್ತರಾಗಿದ್ದ ಸಮಯದಲ್ಲಿ ಬಾಲ ಸಂಗನಬಸವ ಶಿವಯೋಗಿಗಳು ಕೆಲವು ದೃಶ್ಯಗಳನ್ನು ಕಂಡು ಗಾಬರಿಯಾದರು! ಅಂದು ರಾತ್ರಿ ಸ್ವಪ್ನದಲ್ಲಿಯೂ ಕಂಡ ದೃಶ್ಯವಿದು:

ಬಂಥನಾಳ ಪೀಠದ ಅಧಿಕಾರಿ ಚೆನ್ನಬಸವಸ್ವಾಮಿಗಳವರನ್ನು ಶಿವದೂತರು ಹೆಗಲ ಮೇಲೆ ಹೊತ್ತುಕೊಂಡು ಒಯ್ಯುತ್ತಿದ್ದಾರೆ! ಸಾವಿರಾರು ಜನ ಜಂಗುಳಿ ನೆರೆದಿದೆ! ಸುತ್ತಲೂ ಮೌನ ಮೆರವಣಿಗೆ! ಇದ್ದಕ್ಕಿದ್ದಂತೆ ಚೆನ್ನಬಸವಸ್ವಾಮಿಗಳು 'ನಡೆ ಮಗು ಬಂಥನಾಳಕ್ಕೆ!' ಎಂದು ನುಡಿದ ವಾಣಿ. ಈ ದೃಶ್ಯಗಳನ್ನು ಕಂಡು ಕಳವಳಗೊಂಡ ಸಂಗನಬಸವ ಶಿವಯೋಗಿ

ಕ್ಷಣ ಎದ್ದು ಕುದುರೆಯನ್ನೇರಿ ಲಗುಬಗೆಯಿಂದ ಬಂಥನಾಳ
ತ್ತ ಸಾಗಿ ಬಂದ

ಬಂಥನಾಳದಲ್ಲಿ ನಡೆದುದು ಅನಿರೀಕ್ಷಿತ ಘಟನೆ, ಚೆನ್ನ
ಸವಸ್ವಾಮಿಗಳು ಕಾಯಿಲೆಯಿಂದ ನರಳಿದವರಲ್ಲ. ದಿನ
ತ್ಯದಂತೆ ಸಂಜೆಯ ಪ್ರವಚನ ಸಮಯದಲ್ಲಿ ಭಕ್ತಾದಿಗಳಿಗೆ
ಪ್ಪಣೆ ಕೊಡಿಸಿದರು:

'ನಮ್ಮ ಅವಧಿ ಮುಗಿದಿದೆ. ಶಿವನ ಕರೆ ಬಂದಿದೆ.
ಂತೋಷದಿಂದ ತೆರಳುತ್ತೇವೆ! ನಿಮ್ಮ ನಿಷ್ಠೆ ಭಕ್ತಿ ಅಚಲ
ಾಗಿರಲಿ!' ಎಂದರು.

'ಮುಂದೇನು ಗತಿ ಸ್ವಾಮೀ, ಕಾಪಾಡಬೇಕು!'
ಕ್ತರು ಬೇಡಿಕೊಂಡರು. 'ಮಹಾ ಜನಗಳೆ, ನಮ್ಮ ಅಗಲಿಕೆ
ಿಂದ ನಷ್ಟವಿಲ್ಲ; ಲಾಭವೇ ಜಾಸ್ತಿ. ನಮ್ಮ ಸಮಾಧಿ
ಾದ ಮೂರು ತಾಸುಗಳಲ್ಲಿ ಮಂಗಲಮೂರ್ತಿ ಬಾಲ
ವಯೋಗಿ ತಾನಾಗಿಯೆ ಬರುತ್ತಾನೆ! ಅವನೇ ಈ ಪುಣ್ಯ
ೀಠದ ಉತ್ತರಾಧಿಕಾರಿ! ಬಂಥನಾಳದ ಭಾಗ್ಯ!' ಹೀಗೆಂದು
ಪ್ಪಣೆ ಕೊಡಿಸಿ ಶಿವಾಧೀನರಾದರು.

ಬೆಳಿಗ್ಗೆ ಸಮಾಧಿ ಕಾರ್ಯ ಮಂಗಲಕರವಾಗಿ ನೆರ
ೇರಿತು. ಸುತ್ತಲಿನ ಗ್ರಾಮಗಳ ಸಾವಿರಾರು ಜನ ಭಕ್ತರು
ೆರೆದಿದ್ದರು. ಯರನಾಳ ಪೀಠದ ಬಾಲ ಶಿವಯೋಗಿಗಳು
ುದುರೆಯನ್ನೇರಿ ಮಧ್ಯಾಹ್ನದ ಹೊತ್ತಿಗೆ ದಯಮಾಡಿಸಿದರು.
ವರ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಸಾವಿರಾರು ಜನರು
ಯಘೋಷಗಳೊಂದಿಗೆ ಸ್ವಾಗತಿಸಿದರು. ಸಮಾಧಿಯ

ಮುಂದೆ ಧ್ಯಾನಾಸಕ್ತರಾಗಿ ಕುಳಿತ ಬಾಲಶಿವಯೋಗಿಗ
ಮುಖದಲ್ಲಿ ಪ್ರಸನ್ನತೆ, ಶಾಂತತೆ, ಘನ ಗಾಂಭೀರ್ಯ ತುಂ
ತುಳುಕುವುದನ್ನು ಕಂಡ ಜನಸ್ತೋಮ ಮನದುಂಬಿ ಸಾಷ್ಟಾಂ
ವೆರಗಿತು.

ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಬಂಥನಾ
ಗ್ರಾಮ, ತನ್ನ ಗತಕಾಲದ ಖ್ಯಾತಿ ಎಂದರೆ ಕುಗ್ರಾಮ
ಕೊಲೆ, ಸುಲಿಗೆಗಳಿಗೆ ಹೆಸರುವಾಸಿ. ಇಂಥ ಕುಗ್ರಾಮ
ಕಲಂಕವನ್ನು ತೊಡೆದು ಹಾಕಲೆಂದೇ ಸುಮಾರು ೭
ವರುಷಗಳ ಹಿಂದೆ ೧೯೩೦ ರಲ್ಲಿ ವೃಷಭಲಿಂಗರೆಂಬ ಶಿವಯೋ
ಗಳು ಬಂಥನಾಳಕ್ಕೆ ದಯಮಾಡಿಸಿದರು. ಅಲ್ಲಿ ಶೂನ
ಪೀಠವನ್ನು ಸಂಸ್ಥಾಪಿಸಿದ ಪುಣ್ಯ ಪುರುಷರವರು.

'ಕುಜನರಲ್ಲಿಯೂ ಆತ್ಮನಿದ್ದಾನೆ; ಅವರೂ ಶಿವ
ಸ್ವರೂಪ. ಎಂಥ ತಪ್ಪುಗಳನ್ನು ಮಾಡುತ್ತಿದ್ದೇವೆ ಎಂ
ಅರಿವು ಇರದ್ದರಿಂದ ಅವರಿಗೆ ಹಿತಾಹಿತಗಳ ಕಲ್ಪನೆಯೆ
ಬಾರದು. ಹೊಟ್ಟೆಯ ಪಾಡಿಗಾಗಿ ಹೊಡೆದಾಟ ಬಡಿದಾಟ
ಬಿಟ್ಟು ಹೋಗುವ, ಕಟ್ಟಿಕೊಂಡು ಬಾರದ ಹೊಲಮ
ಗಳಿಗಾಗಿ ಕೊಲೆ ಸುಲಿಗೆಗಳು! ತನಗೆ ಮುನಿವವರಿಗೆ ತ
ಮುನಿಯಬೇಕೆ? ಮನೆಯ ಕಿಚ್ಚು ಮನೆಯ ಸುಡುವುದಲ್ಲ
ನೆರೆಮನೆಯ ಸುಡುವುದೇ? ಬಂಥನಾಳದ ಬಂಧುತ್ವ
ಬೀಡಾಗಬೇಕಾಗಿದೆ. ಒಲವು ನಲಿವು ಇಲ್ಲಿ ರಾರಾಜಿಸಬೇಕ
ಗಿದೆ. ನಿಮಗಾಗಿ ನಾನು, ನನಗಾಗಿ ನೀವು. ಸಹಜೀವ
ಸದಾಚಾರಗಳೇ ಸುಖ ಶಾಂತಿಗಳಿಗೆ ಸೋಪಾನವೆಂದು ವೃಷ

ಂಗ ಶಿವಯೋಗಿಗಳು ಬಂಥನಾಳದ ಜನರಲ್ಲಿ ಉಪದೇಶಾವೃ ಶವನ್ನು ಬಿತ್ತಿ ಬೆಳೆಯಲನುವಾದರು. ಅವರ ತಾಳ್ಮೆ ಅಗಾಧ ವಾಗಿತ್ತು. ಆಚಾರದಂತೆ ವಿಚಾರ. ಒಳ ಹೊರಗು ಶುದ್ಧ ಜೀವನ. ಕುಗ್ರಾಮದಲ್ಲಿ ಕರುಣಾಳು ಬೆಳಕು ತನ್ನ ಸದಾ ಕಾರ ಪಸರಿಸಿತು.

ವೃಷಭಲಿಂಗ ಶಿವಯೋಗಿಗಳು ಹುಟ್ಟಾ ಸನ್ಯಾಸಿಯಲ್ಲ, ಸವ ಕಲ್ಯಾಣದ ಪುಣ್ಯ ವಲಯದ ನಿಲುವಂಗಿ ಗ್ರಾಮದ ಗರ್ಭ ಶ್ರೀಮಂತರಾದ ಶಿವಪ್ರಭು ನೀಲಾಂಬೆಯರ ಏಕ ಮಾತ್ರ ಪುತ್ರ. ಎಳೆತನದಲ್ಲಿಯೇ ಸುಖ ಸಂಪದಗಳಲ್ಲಿ ನಿರಾ ಸಕ್ತಿ. ಬುದ್ಧನಂತೆ ಮಾಯಾನಿರಸನ, ಇದು ಕಲ್ಯಾಣ ನಾಡಿನ ಶರಣರ ಹಿರಿದಾದ ಗುಣ ವಿಶೇಷ. ತಾರುಣ್ಯದಲ್ಲಿ ಮನೆಬಿಟ್ಟು ವಿರಕ್ತನಾಗಿ ಹೊರಬಿದ್ದ ಬಸವಲಿಂಗ. ಅಲ್ಲಮಪ್ರಭುವಿನಂತೆ ದೇಶ ಸಂಚಾರ; ಹಸಿವಾದಡೆ ಭಿಕ್ಷಾನ್ನ, ಶಯನಕ್ಕೆ ಗಿಡಮರ ಗಳೇ ಆಸರೆ, ಹೀಗೆ ಅಲೆಯುತ್ತ ಬಂಥನಾಳಕ್ಕೆ ಬಂದರು. ಊರ ಹೊರವಲಯದ ಗಿಡದ ಮೇಲೆಯೇ ಮೌನ ಧ್ಯಾನ. ಜನರ ಕರುಳು ಕರಗಿತು! ಕೆಳಗಿಯಲು ಪ್ರಾರ್ಥಿಸಿದರು. ದೇವರೇ ನೀವೆಂದು ಕೈಮುಗಿದರು. ಬಂಥನಾಳದಲ್ಲಿ ಬಸವ ಲಿಂಗರು ತಳ ಊರಿದರು. ಮಠ ಸ್ಥಾಪಿಸಿದರು. ಪತಿತರನ್ನು ಪುನೀತಗೊಳಿಸಲು ಅವರು ನಿರಂತರವಾಗಿ ಪ್ರಯತ್ನಿಸಿದ ಕಥೆ ಎಲ್ಲಾ ಪುರಾಣವಾಗಿ ಪರಿಣಮಿಸಿದೆ. ಬಸವಲಿಂಗರೇ ವೃಷಭ ಲಿಂಗರು.

ಅನಂತರ ಬಂಥನಾಳ ಶೂನ್ಯ ಸಿಂಹಾಸನವನ್ನು ಅಲಂ‍ರಿಸಿದ ಸದ್ಗುರುಗಳೆಂದರೆ ಶಂಕರಲಿಂಗ ಶಿವಯೋಗಿಗಳು ಮೂರನೆಯವರು ಚೆನ್ನಬಸವ ಶಿವಯೋಗಿಗಳು, ಆ ಬಳಿ ೧೯-೬ರಲ್ಲಿ ಬಂಥನಾಳದ ಭಾಗ್ಯವಾಗಿ ಪೀಠವನ್ನೇರಿದವರ ಶ್ರೀ ಸಂಗನಬಸವ ಶಿವಯೋಗಿಗಳವರು.

ಲಿಂಗೈಕ್ಯರಾದ ಚೆನ್ನಬಸವ ಶಿವಯೋಗಿಗಳವರ ಅಂತಿಮ ದರ್ಶನಕ್ಕೆ ದಯಮಾಡಿಸಿದ್ದ ಬಬಲೇಶ್ವರದ ಶ್ರೀ ಶಾಂತವೀ ಮಹಾಸ್ವಾಮಿಗಳು, ಸುಕ್ಷೇತ್ರ ಲಚ್ಯಾಣದ ಶ್ರೀ ಸಿದ್ಧಲಿಂ ಮಹಾರಾಜರು, ಬೀಳೂರ ಮಹಾಶಿವಯೋಗಿಗಳು ಅಥಣಿಯ ಚೆನ್ನಬಸವಸ್ವಾಮಿಗಳವರು ಪೀಠವನ್ನು ಅಲಂಕರಿಸುವ ಶ್ರೀ ಸಂಗನಬಸವ ಶಿವಯೋಗಿಗಳಿಗೆ ಪಟ್ಟಾಧಿಕಾರ ಸ್ವೀಕಾರದ ಸಮಾರಂಭದಲ್ಲಿ ಶುಭಕೋರಿದರು. ಆಗ ಶ್ರೀ ಮದಥಣಿಯ ಶ್ರೀ ಚೆನ್ನಬಸವ ಶಿವಯೋಗಿಗಳವರು ನೀಡಿದ ಸಂದೇಶವಿದು:

'ಬಂಥನಾಳವು ಹಿಂದೆ ಕೊಳೆ ತುಂಬಿದ ಕುಗ್ರಾಮವಾಗಿತ್ತು. ಜನಮನದ ಕೊಳೆಯನ್ನು ಕಳೆಯಲು ಮನ ಪರಿವರ್ತಿಸಲು ಸದ್ಗುರು ವೃಷಭಲಿಂಗ ಶಿವಯೋಗಿಗಳವರು ತಮ್ಮ ಜೀವನವನ್ನೇ ಅರ್ಪಿಸಿದ್ದಾರೆ. ಶ್ರೀ ಶಂಕರಲಿಂಗಶಿವಯೋಗಿಗಳು ಸತತ ಸಾಧನೆಗೈದು ಸಾರ್ವಜನಿಕರಿಗೆ ಸುಖ ಶಾಂತಿ ಸಂತೃಪ್ತಿ ದೊರೆಯುವಂತೆ ಪರಿಶ್ರಮಿಸಿದರು. ಅವರ ಶಿಷ್ಯ ಶಿರೋಮಣಿ ಲಚ್ಯಾಣದ ಶ್ರೀ ಸಿದ್ಧಲಿಂಗ ಮಹಾರಾಜರು ಬಂಥನಾಳ ಮಠದ ಶ್ರೇಯೋಭಿವೃದ್ಧಿಗೆ ಬೆನ್ನೆಲುಬಾಗಿ ದಿವ್ಯ ಶಕ್ತಿಯಾಗಿ ನಿಂತಿರುವರು. ಈಗ ಪೂಜ್ಯ ಚೆನ್ನಬಸವಸ್ವಾಮಿ

ಗಳವರ ಸಂಕಲ್ಪದಂತೆ ಅವರ ಪ್ರೀತಿಯ ಪುತ್ಥಳಿಯಾದ ೧೬ ವರುಷ ವಯಸ್ಸಿನ ನಿರಂಜನ ಮೂರ್ತಿ ಶ್ರೀ ಸಂಗನಬಸವ ಶಿವಯೋಗಿಗಳವರು ಪುಣ್ಯ ಪೀಠವನ್ನು ಅಲಂಕರಿಸುತ್ತಿರುವರು. ನಿಜವಾಗಿಯೂ ಬಂಥನಾಳ ಪೀಠದ ಭಾಗ್ಯ ದೇವರು ಇವರಾಗುತ್ತಾರೆಂದು ನನ್ನ ಅಂತರ್ವಾಣಿ ಮಿಡಿಯುತ್ತಿದೆ. ಸತ್ಯಂ ಶಿವಂ ಸುಂದರಂ.'

ಶ್ರೀ ಸಂಗನಬಸವ ಶಿವಯೋಗಿಗಳು ೧೯೧೬ ರಲ್ಲಿ ಬಂಥನಾಳ ಪೀಠವನ್ನು ಅಲಂಕರಿಸಿದರು.

# ಸತತ ಸಾಧನೆ–ಶೀಲ ಸಂಪಾದನೆ

ಬಂಥನಾಳ ಮಠದತ್ತ ಸಾವಿರಾರು ಭಕ್ತರನ್ನು ಆಕರ್ಷಿಸಿದ ಲಿಂಗೈಕ್ಯರಾದ ವೃಷಭಲಿಂಗ ಹಾಗೂ ಶಂಕರಲಿಂಗ ಶಿವಯೋಗಿಗಳವರಂತೆ ತಾವಾದರೂ ಅವರ ದಾರಿಯಲ್ಲಿ ಸಾಗುವ ಹಂಬಲ, ಹದಿನಾರರ ಪ್ರಾಯದ ಶಿವಯೋಗಿ ಸಂಗನಬಸವರಲ್ಲಿ ಚಿಗುರೊಡೆಯಿತು. ಅದು ಸುಧಾರಣೆಯ ಸುಳಿಗಾಳಿ ಮೆಲ್ಲಗೆ ಹರಡುತ್ತಿರುವ ಕಾಲ. ಎಳೆಯರಾದರೂ ಇವರಲ್ಲಿ ಸಾಮಾಜಿಕ ಪ್ರಜ್ಞೆ ಅಧಿಕವಾಗಿತ್ತು. ಭಕ್ತರಿಗೆ ನೈತಿಕ ಜೀವನದ ಹಿರಿಮೆಯನ್ನು, ಧಾರ್ಮಿಕ ಪ್ರವೃತ್ತಿಯನ್ನು ಉಪದೇಶಿಸಲು ತಾವು ಸನ್ನದ್ಧರಾಗಲು ಅಣಿಯಾದರು. ವೇದ, ಉಪನಿಷತ್ತು, ಪಾತಂಜಲಿಯೋಗ ಸೂತ್ರ, ಶೂನ್ಯ ಸಂಪಾದನೆ, ಶರಣರ ಜೀವನ ಎಲ್ಲವನ್ನೂ, ಅಭ್ಯಸಿಸಲು ಮಾರ್ಗದರ್ಶನ ಪಡೆಯಲು ಹಿರಿಯ ಶಿವಯೋಗಿಗಳನ್ನು, ಪಂಡಿತರನ್ನು ಮಠಕ್ಕೆ ಆಮಂತ್ರಿಸಿ ಅವರ ಅನುಭವದ ರುಚಿ ಶುಚಿ ತಮ್ಮಲ್ಲಿ ಅಳವಡಿಸಿಕೊಂಡರು. ಅಥಣಿ, ಬೀಳೂರ, ಬಬಲೇಶ್ವರ ಮಠಗಳ ಶಿವಯೋಗಿಗಳವರು ಈ ದಿಶೆಯಲ್ಲಿ ಮುನ್ನಡೆಸಿದ ದಾರಿದೀಪವಾದರು.

೧೯೧೭ ರಲ್ಲಿ ಭೀಮಾತೀರದ ಭೀಮೇಶ್ವರ ಬೆಟ್ಟದಲ್ಲಿ ಶ್ರೀ ಸಂಗನಬಸವ ತರುಣ ಸ್ವಾಮಿಗಳು ಪ್ರಪ್ರಥಮ ಅನುಷ್ಠಾನ ಕೈಕೊಂಡ ಸಮಯದಲ್ಲಿ ಸುತ್ತಲಿನ ಹಳ್ಳಿಗರಲ್ಲಿ ಆದರಾಭಿಮಾನ ಮೂಡಿದವು. ತಿಂಗಳುಗಟ್ಟಲೆ ಮೌನ ಧ್ಯಾನ, ಯೋಗಾಸನದ ಅಭ್ಯಾಸ, ಮಿತವಾದ ಆಹಾರ ಸೇವನೆಗಳಿಂದ

ಅವರಲ್ಲಿ ಹೊಸದೊಂದು ಶಕ್ತಿ, ಶಾಂತಿ, ಆತ್ಮವಿಶ್ವಾಸ, ಜನಾನುರಾಗ ಪ್ರಾದುರ್ಭವಿಸಿದವು. ಪ್ರಸನ್ನತೆ ಉತ್ಸಾಹ ಮೂರ್ತಿಯಾಗಿ ಎಲ್ಲರನ್ನೂ ಆಕರ್ಷಿಸಿದರು.

ಗ್ರಾಮೀಣ ಜನತೆಯನ್ನು ಸದಾಚಾರಕ್ಕೆ ಎಳೆತರಲು ಪುರಾಣ ಪ್ರವಚನಗಳೇ ಪ್ರಮುಖ ಮಾಧ್ಯಮವೆಂದು ನೆರೆ ನಂಬಿದ ತರುಣ ಶಿವಯೋಗಿಗಳು ಸಂಗೀತ ವಿದ್ವಾನರನ್ನು ಬರಮಾಡಿಕೊಂಡು ಅವರಿಂದ ಸಂಗೀತ ಕಲಿತರು. ಕೀರ್ತನಕಾರರು, ಪ್ರವಚನ ಪಟುಗಳು ಪ್ರತಿ ಅಮಾವಾಸ್ಯೆಯ ದಿನ ಬಂಥನಾಳಕ್ಕೆ ಬರುವಂತೆ ಯೋಜನೆ ಪ್ರಾರಂಭಿಸಿದರು. ೧೯-೨೦ರ ಸುಮಾರಿಗೆ ಸ್ವಯಂ ಸಿದ್ಧರಾಗಿ ತಾವೇ ಪ್ರವಚನ ಪ್ರಾರಂಭಿಸಿದರು. ಇಂಪಾದ ಸಂಗೀತದ ಶ್ರೀಕಂಠ, ರೂಪಕಗಳನ್ನು ಕಣ್ಣಿಗೆ ಕಟ್ಟುವಂತೆ, ಮನಕ್ಕೆ ತಟ್ಟುವಂತೆ ಸಾದರಪಡಿಸುವ ಜಾಣ್ಮೆ ಅವರಲ್ಲಿ ದಿನೇ ದಿನೇ ವಿಕಾಸವಾಯಿತು.

ತಮಗೆ ಕ್ಲಿಷ್ಟವೆನಿಸಿದ ಅರ್ಥೈಸಲು ಸಾಧ್ಯವಾಗದ ಶರಣರ ವಚನಗಳನ್ನು ರಾವ್‌ಬಹಾದ್ದೂರ ಫ. ಗು. ಹಳಕಟ್ಟಿ ಅವರ ಹತ್ತಿರ ತಾವಾಗಿಯೇ ವಿಜಾಪುರಕ್ಕೆ ಹೋಗಿ ಚರ್ಚಿಸಿ, ಅವರಿಂದ ಮಾರ್ಗದರ್ಶನ ಪಡೆದರು. ಬಂಥನಾಳ ಶ್ರೀ ಸಂಗನಬಸವ ಶಿವಯೋಗಿಗಳಲ್ಲಿಯ ಜಿಜ್ಞಾಸೆ, ಅಭಿಮಾನ ನಿಷ್ಠೆಗಳನ್ನು ಚೆನ್ನಾಗಿ ಗುರುತಿಸಿದ ವಚನ ಪಿತಾಮಹ ಹಳಕಟ್ಟಿಯವರು ತುಂಬು ಹೃದಯದಿಂದ ತೆರೆದ ಮನಸ್ಸಿನಿಂದ ಶಿವಯೋಗಿಗಳವರ ಭವಿಷ್ಯವನ್ನು ಚೆನ್ನಾಗಿ ರೂಪಿಸಲು ೧೯೨೦ರಲ್ಲಿಯೇ ಮುಂದಾದರು. ಕೇವಲ ಧಾರ್ಮಿಕ ಕ್ರಾಂತಿಯಿಂದ

ಮಠಾಧೀಶರು ತೃಪ್ತರಾಗಬಾರದು. ಸಾಮಾಜಿಕ ಹಾಗೂ ಶೈಕ್ಷಣಿಕ ಕ್ರಾಂತಿ ಅವರ ಪರಮ ಕರ್ತವ್ಯವಾಗಬೇಕು. ಮಠ ಗಳು ಸಮಾಜದ ಸ್ವಾಸ್ಥ್ಯ ಕಾಪಾಡುವ ಕೇಂದ್ರಗಳಾಗಬೇಕು; ಮಠಾಧೀಶರು ತ್ಯಾಗ ಮಾಡಿದರೇನೇ ಯೋಗ್ಯತೆ ಹೆಚ್ಚುವದು. ಈ ಮೂಲಭೂತ ವಿಚಾರಗಳು ತರುಣ ಶಿವಯೋಗಿ ಸಂಗನ ಬಸವರ ಮನದಾಳದಲ್ಲಿ ಬೇರೂರಿದವು. ಅವರ ಪಾಲಿಗೆ ವಚನ ಪಿತಾಮಹ ಫ. ಗು. ಹಳಕಟ್ಟಿಯವರು ಬಸವಣ್ಣನಾಗಿ ಭಕ್ತಿ ಕಲಿಸಿದರು; ಅಲ್ಲಮನಾಗಿ ಆತ್ಮಜ್ಞಾನ ಉಣಿಸಿದರು. ಹಳಕಟ್ಟಿ ಯವರು ಕರುಣಾಳು ಬೆಳಕಾಗಿ ಮಾರ್ಗದರ್ಶನ ಮಾಡಿದ ಉಪಕೃತಿಯನ್ನು ಬಂಥನಾಳ ಶಿವಯೋಗಿಗಳವರು ತುಂಬಾ ಆದರದಿಂದ ಸಂತಸದಿಂದ ಪ್ರಾಜ್ಞರ ಸಮ್ಮುಖದಲ್ಲಿ ಸ್ಮರಿಸಿ ದ್ದುಂಟು. ಅವರು ಪದವಿ ಪಡೆದವರಲ್ಲ. ಮುಲ್ಕೀ ಪರೀಕ್ಷೆಯೆ ಅಂತಿಮ ಪದವಿ. ಸಂಸ್ಕೃತ ಪಾಠಶಾಲೆಯಲ್ಲಿ ಸುವರ್ಣ ಪದಕ ಪ್ರಾಪ್ತಿ. ಅನಂತರ ಮಠದಲ್ಲೇ ಸ್ವಯಂ ಓದು, ಸ್ವಯಂ ಸಾಧನೆ. ಅನುಭವಿಗಳ ಸಂಪರ್ಕ–ಸಂದರ್ಶನ–ಮಾರ್ಗದರ್ಶನ ಗಳೇ ಅವರ ಪಾಲಿಗೆ ವಿಶ್ವವಿದ್ಯಾಲಯಗಳಾದವು.

ಪ್ರಭುಲಿಂಗಲೀಲೆ, ಸಿದ್ಧರಾಮ ಪುರಾಣ, ಬಸವ ಪುರಾಣ, ಶಿವತತ್ವ ಚಿಂತಾಮಣಿ, ಅಕ್ಕಮಹಾದೇವಿ, ಚೆನ್ನ ಬಸವ ಪುರಾಣ, ನಿಜಗುಣರ ತತ್ವಬೋಧೆ ಎಲ್ಲದರಲ್ಲೂ ತಿಂಗಳುಗಟ್ಟಲೆ ಪ್ರವಚನ ಹೇಳುವ ಮೋಡಿ, ಛಲ, ಬಲ ಅವರಿಗೆ ಸಾಧಿಸಿದಂತೆ ಮತ್ತಾರಿಗೂ ಸಾಧಿಸಿಲ್ಲವೆಂದು ಸಾವಿ ರಾರು ಲಕ್ಷಾಂತರ ಭಕ್ತರ ಅಭಿಪ್ರಾಯ.

ಇಪ್ಪತ್ತು ವರುಷದ ಆಕರ್ಷಕ ವ್ಯಕ್ತಿತ್ವದ ಸಂಗನಬಸವ ಶಿವಯೋಗಿಗಳವರನ್ನು ಅಗ್ನಿ ಪರೀಕ್ಷೆಗೆ ಈಡುಮಾಡಿದ ಹಲನಾರು ಸಂದರ್ಭಗಳು ಅವರನ್ನು ಜಯಶೀಲರನ್ನಾಗಿಸಿದವು. "ಸನ್ಯಾಸಿಗೆ ಸತ್ವಪರೀಕ್ಷೆಯ ಸಂದರ್ಭಗಳು ನಿತ್ಯ ಎದುರಾಗುತ್ತವೆ. ಕಹಿಯಾದರೂ ಸ್ವೀಕರಿಸಿ ಅದನ್ನು ಸಿಹಿಗೊಳಿಸುವ ಸ್ಥೈರ್ಯ-ತಾಳ್ಮೆಗಳು ನಮ್ಮಲ್ಲಿ ಅಗತ್ಯ. ಅಳು ನುಂಗಿ ನಗುವುದನ್ನು ಬೋಧಿಸುವುದು ಸರಳ; ಅನುಭವಿಸುವುದು- ಎದುರಿಸುವದು ಕಠಿಣ. ನಾನು ಕಷ್ಟನಷ್ಟಗಳನ್ನುಂಡೇ ಗಟ್ಟಿಗೊಂಡು ಬೆಳೆದಿದ್ದೇನೆ." ಇದು ಅವರ ಸ್ವಾನುಭಾವದ ನುಡಿ.

# ದಯವೇ ಧರ್ಮದ ಮೂಲ

ಬಂಥನಾಳ ಶಿವಯೋಗಿಗಳು ಸ್ವಭಾವತಃ ಸಂಘ ಜೀವಿ ಬಡವಬಲ್ಲಿದರು, ದೀನದಲಿತರು, ರಾಜಕಾರಣಿಗಳು, ಭೂ ಪಿಶಾಚಿ ಬಾಧೆಯಿಂದ ಬಳಲುವವರು ಪ್ರತಿ ಅಮಾವಾಸ್ಯೆಯ ದಿನ ಮಠಕ್ಕೆ ಬಂದು ಪ್ರವಚನ ಕೇಳಿ ಆಶೀರ್ವಾದ ಪಡೆದ ಹೋಗುವರು. ಅತಿಥಿ ದೇವರೆಂದು ನೆರೆನಂಬಿದ ಅವರು ಮ ದಲ್ಲಿ ನಿತ್ಯ ದಾಸೋಹವನ್ನು ೧೯೨೦ರಲ್ಲಿ ಸುವ್ಯವಸ್ಥಿತಗೊಳಿ ದರು. ಹೊತ್ತು ವೇಳೆಯನ್ನದೆ ಮಠಕ್ಕೆ ಬರುವ ಯಾತ್ರಿ ರಿಗೆ ಆದರ, ಆಶ್ರಯ, ಪ್ರಸಾದ ಪೂರೈಕೆ ಆಗಿನಿಂದಲೇ ಪ್ರಸಿ ವಾಯಿತು. ಡೋಣಿ ಸಾಲಿನ ರೈತರು ಮಠದ ದಾಸೋಹಕ ಮುಕ್ತ ಮನಸ್ಸಿನಿಂದ ಗಾಡಿತುಂಬ ಗೋದಿ, ಜೋಳ, ಬೇ ಸಲ್ಲಿಸಹತ್ತಿದರು. ಭಕ್ತರು ಕೊಡುವ ಕಾಣಿಕೆ ದವಸಧಾನ ಗಳ ಸದುಪಯೋಗವಾಗಬೇಕೆಂದು ದಾಸೋಹದ ವ್ಯವಸ್ಥೆ ತ್ಯಾಗಮನೋಭಾವದ ವ್ಯಕ್ತಿಗಳನ್ನೇ ಶ್ರೀಗಳವರು ನಿಯಮಿ ದರು. ಸಮಾಜದಲ್ಲಿಯ ಇಂಥ ತ್ಯಾಗ ಬುದ್ಧಿಯ ಕಾಯ ಕರ್ತರನ್ನು ಗುರುತಿಸುವಲ್ಲಿ ಬಂಥನಾಳ ಶಿವಯೋಗಿಗಳವ ಪರಿಪಕ್ವ ದೃಷ್ಟಿ ಅವರ ಯೌವ್ವನದಲ್ಲಿಯೇ ಕಂಡು ಬಂ ವಿಶೇಷ ಗುಣ.

ಮಠಕ್ಕೆ ಬಂದವರನ್ನು ಸ್ವತಃ ಮಾತಾಡಿಸಿ, ಅವ ಉಪಚಾರ ಸರಿಯಾಗಿ ನಡೆಯುದನ್ನು ಪರಿಶೀಲಿಸುವುದೆ ಶ್ರೀಗ ವರ ಮೊದಲ ಕಾರ್ಯವಾಯಿತು. ಅನಂತರ ಅವರ ಬೇಕ

ೀಡಿಕೆಗಳ ಬಗ್ಗೆ ಆಪ್ತಾಲೋಚನೆ–ಮನಃಪೂರ್ವಕ ಮಾತು
ತೆ. ಈ ರೀತಿಯ ಅತಿಥಿ ಸತ್ಕಾರ, ಸರಸ ಸಜ್ಜನಿಕೆಯ
ಪಚಾರ, ಆತ್ಮೀಯತೆಯ ಸ್ವಾಗತ ಈ ನಿಯಮಗಳನ್ನು
ಾಚೂ ತಪ್ಪದೆ ಪಾಲಿಸಲು ಮಠದ ಸೇವಾನಿರತ ಕಾರ್ಯ
ರ್ತರಿಗೆ ಶ್ರೀಗಳವರ ಕಟ್ಟಪ್ಪಣೆ.

ಬೆಳಗಿನಲ್ಲೆದ್ದು ಧ್ಯಾನಮಾಡಿ, ದನದ ಕೊಟ್ಟಿಗೆಯಲ್ಲಿಯ ನಕರುಗಳಿಗೆ ಮೇವು ಹಾಕಿ, ಮೈಮೇಲೆ ಕೈಯಾಡಿಸಿ ಾಯುವಿಹಾರಕ್ಕೆ ಹೋಗುವದು ರೂಢಿ. ಬೆಳಗಿನ ಸಮ ಯಕ್ಕೆ ಸರಿಯಾಗಿ ಕೊಟ್ಟಿಗೆಯಲ್ಲಿಯ ದನಕರುಗಳು ಶಿವ ಯೋಗಿಗಳ ಬರುವಿಕೆಯನ್ನು ಪ್ರೀತಿಯಿಂದ 'ಅಂಬಾऽऽ' ಂದು ಸ್ವಾಗತಿಸುವುದನ್ನು 'ದಯವೇ ಧರ್ಮದ ಮೂಲ, ಯವೇಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ....' ಈ ಬಸವ ಬೋಧ ಯನ್ನು ಬೋಧಿಸುವುದಕ್ಕಿಂತ ಕಾರ್ಯಾಚರಣೆಯಲ್ಲಿ ತರು ುದು ಅದೆಷ್ಟು ಶ್ರೇಷ್ಠವೆಂಬುದನ್ನು ಬಂಥನಾಳದ ತರುಣ ಶಿವ ಯೋಗಿಗಳಿಂದ ಅರ್ಧಶತಮಾನದ ಹಿಂದೆಯೇ ಸಾವಿರಾರು ನ ಗ್ರಾಮೀಣ ಭಕ್ತರು ಕಂಡುಕೊಂಡರು.

ಒಂದುದಿನ ಸಂಜೆ ಒಬ್ಬೊಂಟಿಗರಾಗಿ ವಾಯು ವಿಹಾರ ಂದ ಮಠದ ಕಡೆಗೆ ಬರುತ್ತಿದ್ದರು. ಸಂಜೆಗತ್ತಲು. ದಾರಿ ುಲ್ಲಿ ಒಬ್ಬಳು ವಯೋವೃದ್ಧ ಹುಲ್ಲಿನ ಹೊರೆಯನ್ನು ಹೊತ್ತು ಕೊಂಡು ಭಾರ ತಾಳಲಾರದೆ ಕೆಳಕ್ಕೆ ಒಗೆದು 'ಯಪ್ಪಾऽ ಶಿವನೇ ಶಕ್ತಿ ಎಲ್ಲಾ ನಿಂತ್ಹೋಯ್ತು! ಬಿದ್ದ ಹೊರಿ ಯಾರು ಹೊರಿಸಬೇಕೋ ಶಿವನೇ!' ಎಂದು ತನ್ನಷ್ಟಕ್ಕೆ ತಾನೇ ಬಡ

ಬಡಿಸುತ್ತ ನಿಡುಸುಯ್ದಳು. ಅವಸರದಿಂದ ಹಿಂದೆ ಹೊರಟ
ಶ್ರೀಗಳವರು ಕಣ್ಣಾರೆ ಕಂಡು, ಕಿವಿಯಾರೆ ಕೇಳಿ ಮರುಗಿದ
ಅಷ್ಟರಲ್ಲಿ ಮುದುಕಿ: 'ಯಾರು ಮಗಾ, ಜರಾ ಹೊರಿ ಹೊ
ಬರ್ರಿ!' ಎಂದು ಕರೆದಳು.

ಶ್ರೀಗಳು ಹುಲ್ಲಿನ ಹೊರೆಯನ್ನು ತಾವೇ ಹೊ
ಕೊಂಡು ನಡೆದರು. 'ಪುಣ್ಯಾತ್ಮಾ ಯಾರೋ ಬಾಳ
ನೀನು?' ಎಂದು ಅಜ್ಜಮ್ಮ ಆನಂದಾಶ್ರು ಒರೆಸಿಕೊಳ್ಳ
ಕೇಳಿದಳು.

'ಅಜ್ಜಮ್ಮಾ ನಾನೂ ಬಂಥನಾಳದವನೇ. ನಿ
ಮಗನೇ ಅಂತಾ ತಿಳಿ ನಿನಗೆ ಶಕ್ತಿ ಹೋಗಿದೆ. ನಿನ್ನ ಶ
ನನಗೆ ಬಂದಿದೆ. ಗಡಾನೆ ಮನೆಗೆ ಹೋಗೋಣ ನಡಿ!' ಎಂ
ಅಜ್ಜಿಯ ಕೈ ಹಿಡಿದು ಹೊರೆ ಹೊತ್ತು ಕತ್ತಲಲ್ಲಿ ಸಾಗಿದರು.

'ನಿನ್ನ ತಾಯಿ ಹೊಟ್ಟೆ ತಣ್ಣಗಿರಲಿ ಬಾಳ್ಯಾ! ನಿ
ಬಾಳುವೆ ಹಂದರವೇರಿ ಹಬ್ಬಲಿ ಮಗ್ಯಾ!' ಎಂದು ಅಜ್ಜಮ
ಹಾಡಿ ಹರಸುತ್ತ ನಡೆದಳು. ಶ್ರೀಗಳು ಇವರೆಂದು ಅವ
ಗೊತ್ತಾಗುವಂತಿರಲಿಲ್ಲ– ಆ ಇಳಿವಯಸ್ಸಿನಲ್ಲಿ. ಮಠ ಸಮಿ
ಸುತ್ತಿದ್ದಂತೆ ಸೇವಕರಿಬ್ಬರು ಓಡುತ್ತ ಬಂದು:

'ಯಪ್ಪಾs ದೇವರು ಇದೇನು ? ಹೊರಿ ಹೊತ್ತಿ
ತಪ್ಪಾಯ್ತು ಅಜ್ಜಿ! ಎಂಥಾ ಪಾಪದ ಹೊರಿ ಹೊರಿಸಿ
ಅಜ್ಜೀ....!' ಎಂದು ಹೊರೆ ಹೊತ್ತ ಶ್ರೀಗಳಿಗೆ ನಮಿಸಿ, ಹೆ
ಯನ್ನು ಕಸಿದುಕೊಂಡು ಹೊತ್ತುಕೊಂಡರು. ಅಷ್ಟ
ತಾನು ಮಾಡಿದ ಅಪರಾಧ ತಿಳಿದೊಡನೆ ಅಜ್ಜಿ ಅಳುತ್ತ ಶ್ರೀ

ಪಾದಗಳ ಮೇಲೆ ಹೊರಳಾಡಿದಳು. ಶ್ರೀಗಳು ಅಜ್ಜಿಗೆ ಪ್ರತಿ ನಮಸ್ಕಾರ ಹೇಳಿ, ಸಂತೈಸಿ ಅವಳ ಮನೆಗೆ ಬೀಳ್ಕೊಟ್ಟರು.

ಹೀಗೆ ಬಂಥನಾಳ ಶಿವಯೋಗಿಗಳವರ ದಯಾಗುಣ, ಅನುಕಂಪ, ಆದರಾಭಿಮಾನಗಳು ದಿನೇ ದಿನೇ ಹಲವಾರು ಪ್ರಸಂಗಗಳಲ್ಲಿ ವ್ಯಕ್ತವಾಗಿ ಜನಾನುರಾಗ ವೃದ್ಧಿಯಾಯಿತು. ಜನಸಾಮಾನ್ಯರಿಂದ ದೂರ ಸರಿದು ಆತ್ಮಜ್ಞಾನ ಅನುಭಾವ ಸಂಪಾದಿಸಲು ಅವರು ಬಯುಸಿದರೂ ಅದು ಸಾಧ್ಯವಾಗದೆ, ಜನಸಾಮಾನ್ಯರ ಸುಖ ಸಂತೋಷ, ಕಷ್ಟನಷ್ಟಗಳಲ್ಲಿ ಬೆರೆತು ಅರಿತು, ಒಂದಾಗಿ ಒಡಗೂಡಿ, ಒಳಿತಿಗಾಗಿ ಒಪ್ಪುವಂತಹ ಕಾಯಕಗಳನ್ನೇ ಮಾಡುತ್ತ ಆತ್ಮಜ್ಞಾನವನ್ನೂ ಅಪಾರ ಅನು ಭಾವವನ್ನೂ ಸಂಪಾದಿಸಿದರು. 'ಅರ್ಧ ಶತಮಾನದ ನನ್ನ ಜನಸಾಗರದೊಡನಾಟದಿಂದ ಈಗ ನನಗೆ ಒಬ್ಬೊಂಟಿಗನಾಗಿ ರಲು ಸಾಧ್ಯವಾಗುತ್ತಿಲ್ಲ! ವಾರಕ್ಕೊಂದು ದಿನ ಮೌನವ್ರತ ದಿಂದ ವಿಶ್ರಾಂತಿ ಸಿಕ್ಕುವದು. ನಂತರ ನನಗೆ ರಚನಾತ್ಮಕ ಕೆಲಸ ಜನ ಸಂಪರ್ಕ ಇರದಿದ್ದರೆ ನಿರಾಶೆ ಆವರಿಸುತ್ತದೆ!' ಎನ್ನುತ್ತಿದ್ದರು ಶಿವಯೋಗಿಗಳು (೧೯೭೦).

ಮೂಢ ನಂಬಿಕೆ, ಹೀನಸಂಪ್ರದಾಯದ ಪಶುವಧೆ, ಬಲಿ ದಾನಗಳ ವಿರುದ್ಧ ಬಂಡೆದ್ದ ಮಠಾಧೀಶರಲ್ಲಿ ಶ್ರೀ ಬಂಥನಾಳ ಶಿವಯೋಗಿಗಳು ಅಗ್ರಗಣ್ಯರೆನ್ನಬಹುದು. ೧೯೩೩ರಲ್ಲಿ ಹಿಂಸಾ ಚಾರ ಹೀನ ಸಂಪ್ರದಾಯಗಳ ಹಾಗೂ ಪಶುವಧೆಯ ಮೃತ್ಯು ಕೂಪದಿಂದ ಒಂದು ಗ್ರಾಮವನ್ನೇ ಮೇಲೆತ್ತಿ ಪರಿವರ್ತನೆಗೊ ಳಿಸಿ ಪರಿಶುದ್ಧತೆಯ ಮೆಟ್ಟಲೇರಿಸಿದ ಅಪೂರ್ವ ಘಟನೆಯನ್ನು

ನಾವಿಲ್ಲಿ ಸ್ಮರಿಸಬಹುದಾಗಿದೆ.

ಕನ್ನೊಳ್ಳಿ ಸಿಂದಗಿ ತಾಲೂಕಿನ ದೊಡ್ಡ ಗ್ರಾಮ. ಬಂಥನಾಳಕ್ಕೆ ಸಮೀಪ ಜೇರೆ. ಅಲ್ಲಿ ಮಹಾಲಕ್ಷ್ಮೀ ಗ್ರಾಮ ದೇವತೆ. ಮೂರು ವರುಷಕ್ಕೊಮ್ಮೆ ಅದ್ದೂರಿಯ ಜಾತ್ರೆ. ಗ್ರಾಮದ ಪ್ರತಿ ಕುಟುಂಬದವರೂ ಗ್ರಾಮದೇವತೆಗೆ ಕುರಿ, ಕೋಣ ತಪ್ಪದೆ ಬಲಿಕೊಟ್ಟು ರಕ್ತದ ಕಾಲುವೆ ಹರಿಯಿಸಿ ತಮ್ಮ ಹರಕೆ ಪೂರೈಸುವದು ತಲೆ ತಲಾಂತರಗಳಿಂದ ನಡೆದು ಬಂದ ಪದ್ಧತಿ. ಒಂದು ದಶಕದಿಂದ ಕೇಳುತ್ತ ಬಂದಿದ್ದರು ಶಿವಯೋಗಿಗಳು. ಕನ್ನೊಳ್ಳಿ ಬಲಾಢ್ಯರ ಊರು, ಸಿರಿವಂತರ ಸೀಮೆ, ಅಷ್ಟೇ ಅಜ್ಞಾನದ ತವರು. ಸಂತರಿಗೆ ಶರಣರಿಗೆ ತಲೆಬಾಗದ ಜನ. ಕೊಲೆ, ಸುಲಿಗೆ, ಪಾರ್ಟಿ ಪಂಗಡಗಳಿಗೆ ತುಂಬಾ ಪ್ರಸಿದ್ಧಿ. ಫಲವತ್ತಾದ ಭೂಮಿಯ ಫಲವೆಲ್ಲ ಅವ್ಯವಹಾರ ಅತ್ಯಾಚಾರಗಳಿಗೆ ವಿನಿಯೋಗ! ಈ ಗ್ರಾಮದ ಜಾತ್ರೆ ಸಮೀಪಿಸಿತ್ತು. ಶಿವಯೋಗಿಗಳು ತಾವಾಗಿಯೇ ಕೆಲವು ಹಿತೈಷಿಗಳೊಂದಿಗೆ ಕನ್ನೊಳ್ಳಿ ಗ್ರಾಮಕ್ಕೆ ಬಂದು ನಿಂತಾಗ ಎಲ್ಲರಿಗೂ ಅಚ್ಚರಿ! ಆಗಲೇ ಜಿಲ್ಲೆಯಲ್ಲಿ ಅವರ ಖ್ಯಾತಿ ಹಬ್ಬಿತ್ತು. ಕರೆದರೂ ಬಾರದ ಈ ಸ್ವಾಮಿಗಳು ತಾವಾಗಿಯೇ ನಮ್ಮೂರಿಗೆ ಬಂದರಲ್ಲವೆಂದು ಜನರಿಗೆ ದಿಗಿಲಾಯಿತು; ಸಂತೋಷವೂ ಸುಳಿಯಿತು. ಸಂಜೆಗೆ ಸಾರ್ವಜನಿಕರ ಸಭೆಯ ಏರ್ಪಾಟು ಮಾಡಲು ಶ್ರೀಗಳ ಸೂಚನೆ. ಡಂಗುರ ಸಾರಿದಾಗ ಸಭೆಯಲ್ಲಿ ಗ್ರಾಮದ ಸಾವಿರಾರು ಜನ ನೆರೆದರು. ಶಿವಯೋಗಿಗಳು ತಮ್ಮ ಕಳಕಳಿಯ ಸಂದೇಶವಿತ್ತರು:

"ಕನ್ನೊಳ್ಳಿಯ ಹಿರಿಯರೆ, ಮಾತೆಯರೆ ಹಾಗೂ ಯುವ

ಕರೆ, ಬಂಥನಾಳದ ಪುಣ್ಯ ಪ್ರದೀಪ ವೃಷಭಲಿಂಗ ಶಿವಯೋಗಿಗಳವರ ಅಪ್ಪಣೆಯ ಮೇರೆಗೆ ನಾನಾಗಿಯೇ ನಿಮ್ಮೂರ ಬಾಗಿಲಿಗೆ ಬಂದು ನಿಂತಿದ್ದೇನೆ. ನಾನೇನು ಬೇಡಲು ಬಂದಿಲ್ಲ; ಕಲ್ಯಾಣದ ಸಂದೇಶವನ್ನು ನಿಮ್ಮೆಲ್ಲರಿಗೂ ನೀಡಲು ಬಂದಿದ್ದೇನೆ."

"ನೀವು ಕನ್ನೊಳ್ಳಿಯ ಗ್ರಾಮದೇವತೆ ಶ್ರೀ ಮಹಾಲಕ್ಷ್ಮೀಯ ವರಪುತ್ರರು. ಮೇಲಾಗಿ ಬಂಥನಾಳ ಸುಕ್ಷೇತ್ರದ ಸೀಮೆಯಲ್ಲಿರುವ ಭಾಗ್ಯವಂತರು ನೀವು, ನಿಮ್ಮೆಲ್ಲರ ಯೋಗಕ್ಷೇಮ ನೋಡಿಕೊಳ್ಳುವದು ನಮ್ಮ ಪೀಠದ ಪರಮಕರ್ತವ್ಯ. ಗ್ರಾಮದೇವತೆ ಶ್ರೀಮಾತೆ ಮಹಾಲಕ್ಷ್ಮೀ ಎಂದರೆ ವಿಷ್ಣುವಿನ ರಾಣಿ. ಭಕ್ತರಿಗೆ ವರಕೊಡುವಾಕೆ, ಬೇಡಿ ಕಾಡುವವಳು ಈ ದೇವಿಯಲ್ಲ, ದುರಗವ್ವ, ಮರಗವ್ವ, ಕಾಳಿ ಎಂದು ನೀವು ಸಂಬೋಧಿಸುತ್ತಿರುವದು ನಿಮ್ಮ ಅಜ್ಞಾನದಿಂದ. ಪವಿತ್ರ ದೇವತೆಯನ್ನು ರಾಕ್ಷಸೀ ವೃತ್ತಿಯಿಂದ ಪೂಜಿಸುವದರಿಂದ ಪುಣ್ಯದ ಬದಲು ಪಾಪವನ್ನೇ ಪಡೆಯುತ್ತಿರುವಿರಲ್ಲ! ಪುಣ್ಯ ಪಾಪಗಳ ಪರಿವೆ ಇಲ್ಲದೆ ಹಿಂದಿನ ಹಿರಿಯರು ಮಾಡುತ್ತ ಬಂದಿರುವ ಹೀನ ಪದ್ಧತಿಯನ್ನು ನೀವೂ ಮುಂದುವರೆಯಿಸಿರುವಿರಿ! ಕುರಿ ಕೋಣಗಳು ಸತ್ತರೆ ಅವನ್ನು ನೀವು ದೇವಿಯ ಹೆಸರಿನಲ್ಲಿ ಬಲಿದಾನ ಕೊಟ್ಟರೆ ಅವು ವಿಲಿವಿಲಿ ಒದ್ದಾಡಿ ರಕ್ತಕಾರಿ ಮೂಕ ವೇದನೆಯಿಂದ ಪ್ರಾಣ ಬಿಡುವಾಗ ನಿಮ್ಮ ಗ್ರಾಮದೇವತೆ ಮರಮರನೆ ಮರಗುತ್ತಾಳೆ! ಕಟಕಟನೆ ಹಲ್ಲು ಕಡೆಯುತ್ತಾಳೆ! ಅವಳ ಕೋಪ ನಿಮ್ಮ ಮನೆಮನೆಗಳಲ್ಲಿ ವಿವಿಧ ರೂಪಗಳಿಂದ ಪ್ರಕಟವಾಗುತ್ತದೆ! ಆದರ ಮರ್ಮ ನಿಮಗೆ ತಿಳಿ

ಯದು! ಎಷ್ಟು ಸಂಪತ್ತಿದ್ದರೂ ಯಾರ ಮನೆಯಲ್ಲಿ ಶಾಂತಿ ಇದೆ ಹೇಳಿರಿ! ಒಳ ಜಗಳ ಬಡಿದಾಟ! ಕೋರ್ಟು ಕಚೇರಿಗೆ ಓಡಾಟ! ಬೇನೆ ಬೇಸರಿಕೆ ಸಾವು ನೋವು! ಜ್ಞಾನದ ಬದಲು ಅಜ್ಞಾನದ ಕತ್ತಲೆಯು ಕನ್ನೊಳ್ಳಿಯು ತುಂಬಾ ತುಂಬಿ ಕೊಂಡಿದೆ! ಇದಕ್ಕೆಲ್ಲ' ನೀವು ದೇವಿಗೆ ಮಾಡುತ್ತಿರುವ ಕ್ರೂರ ವಾದ ಪೂಜೆಯೇ ಕಾರಣ! ನಿಮ್ಮಲ್ಲಿ ಬಲಿಕೊಡಲೇಬೇಕೆಂಬ ಹಟವಿದ್ದರೆ ಮೂಕ ಪ್ರಾಣಿಗಳನ್ನೇಕೆ? ನಿಮ್ಮ ಮಕ್ಕಳನ್ನೇ ಬಲಿ ಕೊಟ್ಟು ಪೂಜೆ ಮಾಡಿರಲ್ಲ?! ಪ್ರೇಮ, ಸಹಕಾರ, ದಯಾ ಗುಣ, ಸದಾಚಾರ ಇವುಗಳಿಂದ ಮಾತ್ರ ಸುಖಶಾಂತಿ ಸಿಗಲು ಸಾಧ್ಯ. ಈ ಸಲದ ಜಾತ್ರೆಗೆ ಪ್ರಾಣಿ ವಧೆಯನ್ನು ಪೂರ್ಣ ನಿಲ್ಲಿಸಬೇಕು. ಹೀಗೆಂದು ನೀವೆಲ್ಲರೂ ವಚನಕೊಡಿರಿ! ನೀವು ಒಪ್ಪುವ ತನಕ ನಾನು ನಿಮ್ಮೂರಲ್ಲಿ ಪ್ರಸಾದ ಸೇವಿಸಲಾರೆ!"

ಹೀಗೆಂದು ಘೋಷಿಸಿದರು. ನೆರೆದ ಸಹಸ್ರಾರು ಹಿರಿಯರು ಒಕ್ಕೊರಲಿನಿಂದ:

"ಸದ್ಗುರುಗಳ ವಚನ ಪಾಲಿಸುತ್ತೇವೆ!"

'ಬಂಥನಾಳ ಶಿವಯೋಗಿಗಳಿಗೆ ಜಯವಾಗಲಿ!!'

ಎಂದು ಸಾಲಂಕೃತವಾಗಿ ಘೋಷಿಸುತ್ತ ನಮಸ್ಕರಿಸಿದರು.

ಮುಂದೆ ಕೆಲವೇ ದಿನಗಳ ನಂತರ ಶ್ರೀ ಸಂಗನಬಸವ ಶಿವಯೋಗಿಗಳವರ ನೇತೃತ್ವದಲ್ಲಿ ಮಹಾಲಕ್ಷ್ಮೀ ಜಾತ್ರೆಯು ಹಿಂಸೆಯ ಬದಲು ಪ್ರಾರ್ಥನೆ, ಭಜನೆ, ಮನರಂಜನೆ, ಕುಸ್ತಿ ಪಂದ್ಯಗಳೊಂದಿಗೆ ವಿಜೃಂಭಿಸಿತು. ಈಗ ಕನ್ನೊಳ್ಳಿಯು ರಚನಾತ್ಮಕ ಕಾರ್ಯ ಕ್ಷೇತ್ರಗಳಿಗೆ ಕೇಂದ್ರ ಸ್ಥಳ. ಬಂಥನಾಳ ಮಠದ ಅಭಿಮಾನಿಗಳಲ್ಲಿ ಅಗ್ರಸ್ಥಾನ ಕನ್ನೊಳ್ಳಿಯ ಭಕ್ತರಿಗೆ

# ಬಂಥನಾಳ ಪೀಠದ ಬಲವರ್ಧನೆ

ಸದ್ಗುರು ಶ್ರೀ ಶಂಕರಲಿಂಗರ ಪಾದಕಿಂಕರ ಶಿಷ್ಯೋತ್ತಮ ಲಚ್ಯಾಣದ ಶ್ರೀ ಸಿದ್ಧಲಿಂಗ ಮಹಾರಾಜರು ಲಚ್ಯಾಣದ ರುದ್ರಭೂಮಿಯನ್ನೇ ಸುಕ್ಷೇತ್ರಗೊಳಿಸಿದ ಪುಣ್ಯ ಪುರುಷರು. ಅವರು ಬಂಥನಾಳ ಪೀಠದ ಅನುಯಾಯಿ. ಶ್ರೀಗುರುವೆಂದರೆ ಅವರಿಗೆ ಸಕಲ ಸಂಪದ; ಪ್ರಾಣಕ್ಕಿಂತ ಪ್ರಿಯ. ತಾವು ಸಂಸ್ಥಾಪಿಸಿದ ಜಾತ್ಯಾತೀತವಾದ ಸಂಪದ್ಭರಿತವಾದ ಸುಕ್ಷೇತ್ರ ಲಚ್ಯಾಣ ಮಠವನ್ನು ಗುರು ಪೀಠದ ಶ್ರೀ ಸಂಗನಬಸವ ಶಿವಯೋಗಿಗಳವರ ಪಾದಗಳಲ್ಲಿ ಸಮರ್ಪಿಸಿದರು. (೧೯೩೧ರಲ್ಲಿ.)

ಬಂಥನಾಳ ಪೀಠದ ಏಳ್ಗೆಗಾಗಿ–ಅಭಿವೃದ್ಧಿಗಾಗಿ ಶ್ರೀ ಸಿದ್ಧಲಿಂಗ ಮಹಾರಾಜರು, ಅವರ ಶಿಷ್ಯ ಶಿರೋಮಣಿ ಶ್ರೀ ಕ್ಷೀರಾಲಿಂಗ ಮಹಾರಾಜರು (ಕೃಷ್ಣಾ–ರಾಯಚೂರ), ಮಾತೋಶ್ರೀ ಗಿರೆಮ್ಮತಾಯಿ (ಬೋಳೆಗಾವ–ಇಂಡಿ ತಾಲೂಕ) ಅವರು ಸರ್ವಾರ್ಪಣ ಮಾಡಿದರು. ಹೀಗಾಗಿ ಭಕ್ತರ ಬಳಗ, ಕಾರ್ಯಕ್ಷೇತ್ರ ವಿಶಾಲವಾದುದರಿಂದ ಶ್ರೀ ಸಂಗನಬಸವ ಶಿವಯೋಗಿ ಅವರಿಗೆ ಉತ್ಸಾಹ ಇಮ್ಮಡಿಯಾಯಿತೆನ್ನಬಹುದು. ಒಂದು ಮಠದ ಹಿತಚಿಂತನೆಯ ಜೊತೆಗೆ ಮೂರ್ನಾಲ್ಕು ಮಠಗಳ ಭಾರವನ್ನು ಧರಿಸಿದರು.

ಆಯಾ ಮಠಗಳ ಆದಾಯ ಅಲ್ಲಲ್ಲಿಯೇ ಕಲ್ಯಾಣ ಕಾರ್ಯಗಳಿಗೆ, ಜನಹಿತಕ್ಕೆ ಮೀಸಲಾಗಿರಿಸಿ ಒಳ್ಳೆಯ ತ್ಯಾಗ ಮನೋಭಾವದ ಕಾರ್ಯಕರ್ತರಿಗೆ ಹೊಣೆ ಹೊರಿಸಿದರು.

ತಾವು ಮೇಲ್ವಿಚಾರಣೆಯನ್ನು ಚಾಚೂ ತಪ್ಪದೆ ಗಮನಿಸುತ್ತ ಜನತೆಯ, ಭಕ್ತರ ವಿಶ್ವಾಸ ನಿಷ್ಠೆಗಳಿಗೆ ಮಠದ ದೈನಂದಿನ ಕಾರ್ಯಕಲಾಪಗಳು ಪೂರಕವಾಗಿರುವಂತೆ ನಿಯಮಗಳನ್ನು ಹಾಕಿಕೊಟ್ಟರು.

"ಮಠಗಳೆಂದರೆ ಸಮಾಜಕ್ಕೆ ಮಾರ್ಗದರ್ಶಿ ಕೇಂದ್ರಗಳು ಧರ್ಮ ಪರಿಪಾಲನೆಯೊಂದಿಗೆ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವುದೇ ನಮ್ಮ ಕರ್ತವ್ಯ. ಕಾಯಕದಲ್ಲಿ ನಿರತರಾ ವರಿಗೆ ಜಾತಿ, ಮತ ಪಂಥಗಳ ತಾರತಮ್ಯವಿಲ್ಲದೆ ಪ್ರೋತ್ಸಾಹ ವಿತ್ತು. ಶರಣರಿಗೆ, ಸಾಹಿತಿಗಳಿಗೆ, ಕವಿಗಳಿಗೆ, ಕಲಾವಿದರಿಗೆ ಮಠದಲ್ಲಿ ಗೌರವಾದರಗಳು ದೊರೆಯುವಂತೆ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಪ್ರತಿ ಮಠದಲ್ಲಿಯೂ ಪ್ರಮುಖ ಪ್ರಾಶ ಸ್ತ್ಯವನ್ನಿತ್ತ ಶ್ರೇಯ ನಮ್ಮದಾಗಬೇಕು." ಇದು ಶಿವಯೋಗಿ ಗಳವರು ಅನುಸರಿಸಿದ ಆಚಾರ. ನುಡಿದಂತೆ ನಡೆದು ತೋರಿದ ಚಿರಂತನ ಮಾರ್ಗದರ್ಶನ ಸೂತ್ರ.

# ಹರ್ಡೇಕರ ಮಂಜಪ್ಪನವರಿಂದ ರಾಷ್ಟ್ರೀಯ ದೀಕ್ಷೆ

ಬಂಥನಾಳ ಶಿವಯೋಗಿಗಳ ವಿಚಾರಗಳು ಆಚಾರಕ್ಕಿಳಿದು ಸಮಾಜದ ಉನ್ನತಿಗೆ ಪೋಷಕವಾದುದನ್ನು ಕೆಲವರು ದೇಶಾಭಿಮಾನಿಗಳು, ಸಮಾಜ ಪ್ರೇಮಿಗಳು ಮನದುಂಬಿ ಕೊಂಡಾಡಿದರು; ಆಕರ್ಷಿತರಾದರು. ಇಪ್ಪತ್ಮೂರು ವರುಷದ ಇಂಥ ಮಠಾಧಿಪತಿಯನ್ನು ಕಣ್ಣಾರೆ ಕಂಡು, ಪ್ರೋತ್ಸಾಹಿಸಲು ಅಂದಿನ ಕರ್ನಾಟಕದ ಗಾಂಧೀಜಿ ರಾಷ್ಟ್ರ ಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪನವರು ಬಂಥನಾಳವನ್ನು ಅರಸುತ್ತ ಬಂದರು. ಇಂದಿಗೆ ೫೭ ವರುಷಗಳ ಹಿಂದಿನ ಮಾತು. ವಚನ ಪಿತಾಮಹ ರಾವಬಹಾದ್ದೂರ ಫ. ಗು. ಹಳಕಟ್ಟಿಯವರ ಮುಖಾಂತರ ಬಂಥನಾಳ ಸಂಗನಬಸವ ಶಿವಯೋಗಿಗಳ ಪರಿಚಯದ ಮಾತು ಕೇಳಿದೊಡನೆ ಹರ್ಡೇಕರ ಮಂಜಪ್ಪನವರು 'ಶಿವನಾಜ್ಞೆ' ಎಂದೇ ಹೊರಟರಂತೆ. ಹಳಕಟ್ಟಿಯವರ ಬಗ್ಗೆ ಅವರಲ್ಲಿದ್ದ ನಿಷ್ಠೆ-ವಿಶ್ವಾಸ–ಆದರಗಳು ಈ ಮಾತಿಗೆ ಚಿರಂತನ ಸಾಕ್ಷಿಯಾಗಿ ನಿಂತಿವೆ.

೧೯೩೭ರಲ್ಲಿಯ ಒಂದು ಶುಭೋದಯದ ಸುದಿನ. ಮಧ್ಯಾಹ್ನ ಮೀರಿ ಅಪರಾಹ್ನ ಕಾಲಿರಿಸಿದ ಸಮಯ. ಶಿವಯೋಗಿಗಳು ತಮ್ಮ ವಿರಾಮದ ಕೋಣೆಯಲ್ಲಿ ಸಿದ್ಧಾಂತ ಶಿಖಾಮಣಿ ಓದುತ್ತ ಕುಳಿತಿದ್ದಾರೆ. ಅಂತರ್ಮುಖತೆಯ ಆನಂದದಲ್ಲಿ ಲೀನರಾದ ಅವರಿಗೆ ಬಾಹ್ಯ ಸದ್ದು ಸಪ್ಪಳಗಳು ಕೇಳಿಸಲಿಲ್ಲ.

ದೂರ ಬಹುದೂರದಿಂದ ಶ್ರೀಗಳವರ ದರ್ಶನಕ್ಕಾಗಿ ದಯಮಾಡಿಸಿದ ಮಧ್ಯ ವಯಸ್ಸು ಮೀರಿದ ಪ್ರಸನ್ನ ವದನದ ಅನುಭಾವಿ ವ್ಯಕ್ತಿಯೊಬ್ಬರು ಮಠದ ದ್ವಾರದಲ್ಲಿ ಕೈಜೋಡಿಸಿ ನಿಂತಿದ್ದಾರೆ. ಮೆಲ್ಲನೆ ಒಳಗೆ ಬಂದು ಸುತ್ತಲೂ ಆನಂದದಿಂದ ನೋಡುತ್ತ ವೃಷಭಲಿಂಗ ಮತ್ತು ಶಂಕರಲಿಂಗ ಶಿವಯೋಗಿಗಳ ಸಮಾಧಿ (ಗದ್ದುಗೆ)ಗಳಿಗೆ ದೀರ್ಘದಂಡ ಪ್ರಣಾಮಸಲ್ಲಿಸಿದರು. ದಾಸೋಹದ ಮನೆಯಿಂದ ಬಂದ ಸೇವಕನೊಬ್ಬನು, ಶುಭ್ರವಾದ ಖಾದಿ ಪಂಜೆಯನುಟ್ಟು, ಅಂಥದನ್ನೇ ಹೊದ್ದುಕೊಂಡು, ಹಣೆಯಲ್ಲಿ ಶುಭ್ರವಾದ ವಿಭೂತಿ ಧರಿಸಿದ ಮೇಧಾವಿ ಹರ್ಡೇಕರ ಮಂಜಪ್ಪನವರನ್ನು ಪೂಜ್ಯಭಾವದಿಂದ ನೋಡುತ್ತ:

'ಪೂಜ್ಯರೇ ತಾವು ಮಠಾಧೀಶರೇನು?' ಎಂದು ಕೇಳಿದ.

'ಅಲ್ಲವಪ್ಪ. ನಾನೂ ಒಬ್ಬ ಸೇವಕ–ನಿಮ್ಮ ಹಾಗೆ!'

'ಶಿವಯೋಗಿಗಳಿಗೆ ತಿಳಿಸಿರಿ. ತಮ್ಮನ್ನು ಕಾಣಲು ದೂರದಿಂದ ಒಬ್ಬರು ಬಂದಿದ್ದಾರೆ ಅಂತಾ........!'

ಬಂದ ವ್ಯಕ್ತಿ ಶಿವಯೋಗಿಗಳಿಗೆ ಸಾಷ್ಟಾಂಗ ಪ್ರಣಾಮ ಸಲ್ಲಿಸಿದ. ಕಣ್ತುಂಬ ನೋಡುತ್ತ. ಅಡಿಯಿಂದ ಮುಡಿಯ ವರೆಗೆ ನಿರೀಕ್ಷಿಸಿ ಅವರ ಘನವಾದ ವ್ಯಕ್ತಿತ್ವಕ್ಕೆ ಮುಗ್ಧರಾದ ಶಿವಯೋಗಿಗಳು ಅತ್ಯಾನಂದದಿಂದ:

'ಏಳಿರಿ. ತಮ್ಮ ಹೆಸರೇನು? ಯಾವ ಊರು ತಮ್ಮದು?'

'ನನ್ನ ಊರು ಕಾರವಾರ ಜಿಲ್ಲೆಯ ಬನವಾಸಿ. ನಾನಿರುವುದು ಹೊಸಪೇಟೆ. ಕಾರ್ಯಕ್ಷೇತ್ರ ಈ ಜಿಲ್ಲೆಯ ಆಲಮಟ್ಟಿ. ಅಂತಾ ನಿರ್ಣಯಿಸಿಕೊಂಡಿದ್ದೇನೆ. ನನ್ನ ಹೆಸರು ಹರ್ಡೇಕರ ಮಂಜಪ್ಪ, ತಮ್ಮ ದರ್ಶನದಿಂದ ಧನ್ಯನಾದೆ!'

'ಆಹಾ! ಹರ್ಡೇಕರ ಮಂಜಪ್ಪನವರೇ! ಸಂತೋಷ! ದಯಮಾಡಿಸಿರುವಿರಿ!' ಪುಣ್ಯಾತ್ಮರೇ ನಮ್ಮ ಪುಣ್ಯದ ಫಲವಾಗಿ ಎನ್ನುತ್ತ ಶಿವಯೋಗಿಗಳು ಬಿಗಿಯಾಗಿ ಮಗುವಿನಂತೆ ಅಪ್ಪಿಕೊಂಡು ತಮ್ಮ ಆದರಾಭಿಮಾನ ಸೂಚಿಸಿದರು.

ಸದ್ಭಾವನೆಯ ಉದಾತ್ತ ಧ್ಯೇಯವಾದಿಗಳಿಬ್ಬರ ಸಮಾಗಮನದಿಂದಾದ ಆನಂದದ ರಸನಿಮಿಷಗಳನ್ನು ಕಣ್ಣಾರೆ ಕಂಡ ಮಠದ ಸೇವಕನು ಆನಂದ ಭಾಷ್ಪಸುರಿಸುತ್ತ ಉಭಯತರಿಗೂ ಮುಗ್ಧತೆಯಿಂದ ಸಾಷ್ಟಾಂಗವೆರಗಿದ. ಶಿವಯೋಗಿಗಳು ಮಂಜಪ್ಪನವರನ್ನು ಬಲವಂತದಿಂದ ಖುರ್ಚಿಯ ಮೇಲೆ ಕುಳ್ಳಿರಿಸಲು ಪ್ರಯತ್ನಿಸಿದರು; ಅವರು ಒಪ್ಪಲಿಲ್ಲ. ಅಲ್ಲಿಯೇ ಹಾಸಿದ್ದ ಚಾಪೆಯ ಮೇಲೆ ಶಿಷ್ಯನೋಪಾದಿಯಲ್ಲಿ ಮಂಡಿಸಿದರು-ಮಹಾನುಭಾವರು. ಶಿವಯೋಗಿಗಳು ಅವರ ಸೌಜನ್ಯ ಸರಳತನ ಕಂಡು ಸಂತುಷ್ಟರಾಗಿ:

'ನಮ್ಮ ಹಿರಿಯರಾದ ಫ. ಗು. ಹಳಕಟ್ಟಿಯವರು ತಮ್ಮ ಸಾಧನ ಮಾರ್ಗ, ಕಾರ್ಯಕ್ಷೇತ್ರ ಕುರಿತು ನನಗೆ ಪರಿಚಯಿಸಿದ್ದಾರೆ. ತಮ್ಮನ್ನು ಕಾಣುವ ಉತ್ಕಟ ಹಂಬಲ ನಮ್ಮದಾಗಿರುವಾಗ ಬಯಕೆ ಈಡೇರಿಸಲು ತಾವಾಗಿಯೆ ದಯಮಾಡಿಸಿದ್ದೀರಿ. ಇದು ಈ ಮಠದ ಭಾಗ್ಯವಲ್ಲದೆ ಮತ್ತೇನು?'

ತಮ್ಮ ತ್ಯಾಗ ಬಲು ದೊಡ್ಡದು. ಶಿಕ್ಷಕ ವೃತ್ತಿಗೆ ಶರಣು ಹೊಡೆದು, ರಾಷ್ಟ್ರದ ಹಿತೈಷಿಗರಾದ ತಾವು ೧೯೦೫ರ ಚಳುವಳಿಯಲ್ಲಿ ಧುಮುಕಿದ್ದುದನ್ನು ಕೇಳಿದ್ದೇನೆ. ತಮ್ಮ 'ಧನುರ್ಧಾರಿ' ಪತ್ರಿಕೆಯಲ್ಲಿ ಕ್ರಾಂತಿಕಾರಕ ವಿಚಾರಪೂರ್ಣ ಲೇಖನಗಳನ್ನು ಓದಿ, ಪುಲಕಿತನಾಗಿದ್ದೇನೆ. ತಮ್ಮ 'ರಾಷ್ಟ್ರ ಜೀವನ ಗ್ರಂಥ

ಮಾಲೆ'ಯ ಅಮೂಲ್ಯ ಪುಸ್ತಕಗಳನ್ನು ಓದಿದಾಗಲೇ ತಮ್ಮ ಘನವಾದ ವ್ಯಕ್ತಿತ್ವದ ದರ್ಶನವಾಗಿದೆ. 'ಸತ್ಯಾಗ್ರಹ ಆಶ್ರಮ' ದಲ್ಲಿ ತಾವು ಗೈದ ಸಾಧನೆಯು ನಮ್ಮಂಥಹರಿಗೆ ಮಾರ್ಗ ದರ್ಶನ ನೀಡಿದೆ. ಶಿವನ ಕರುಣೆಯಿಂದ ತಮ್ಮ ಆಗಮನ ನಮಗೆ ದಿವ್ಯವಾದ ಸ್ಫೂರ್ತಿದಾಯಕ ಶಕ್ತಿಯನ್ನೇ ನೀಡಿ ದಂತಾಗಿದೆ! ಎಂದು ಶಿವಯೋಗಿಗಳು ಹರ್ಷ ವ್ಯಕ್ತಪಡಿಸಿದರು. ಆಗ ವಿನಮ್ರತೆಯ ಮೂರ್ತಿ ಹರ್ಡೇಕರ ಮಂಜಪ್ಪನವರು:

'ಪೂಜ್ಯರೇ, ನಾನೊಬ್ಬ ಸಮಾಜ ಸೇವಕ; ಹಿರಿಯನಲ್ಲ. ವ್ಯಕ್ತಿಗಿಂತಲೂ, ಕುಟುಂಬ ಜೀವನಕ್ಕಿಂತಲೂ ದೇಶದ ಹಿತವೇ ದೊಡ್ಡದೆಂದು ನೆರೆ ನಂಬಿದವ ನಾನು. ನಮ್ಮ ಸಮಾಜ, ದೇಶ, ಕೋಟ್ಯಾಂತರ ಭಾರತೀಯರು ದಾಸ್ಯದಲ್ಲಿ ಬಳಲುತ್ತಿ ರುವಾಗ ನಾವು ನೀವು ನೆಮ್ಮದಿಯಿಂದಿರಲು ಸಾಧ್ಯವೇ ? ಅದ ಕ್ಕಾಗಿಯೇ ನಾನು ತಮ್ಮ ಸನ್ನಿಧಾನಕ್ಕೆ ಬಂದಿದ್ದೇನೆ!' ಎಂದು ಕೈಮುಗಿದರು.

'ತುಂಬಾ ಸಂತೋಷ ಹಿರಿಯರೇ' ಎಂದರು ಶ್ರೀಗಳು

'ಪೂಜ್ಯರೇ, ತಮ್ಮಲ್ಲಿ ನನ್ನದೊಂದು ಕೋರಿಕೆ....'

'ಅವಶ್ಯ ಹೇಳಿರಲ್ಲ!'

'ಮಠಗಳು ಸಮಾಜದೇಳ್ಗೆಯ ಕಾರ್ಯದಲ್ಲಿ ಕೇಂದ್ರ ಬಿಂದುಗಳಾಗಿ ಪರಿವರ್ತಿಸಬೇಕು. ಧಾರ್ಮಿಕ ಜಾಗೃತಿ ಯೊಂದಿಗೆ ನಮ್ಮ ದೇಶ-ಬಾಂಧವರಿಗೆ ಶೈಕ್ಷಣಿಕ ಕ್ರಾಂತಿಯೂ ಬಲು ಮುಖ್ಯವಾಗಿದೆ. ಜನಸಾಮಾನ್ಯರಲ್ಲಿ ಅಕ್ಷರಭ್ಯಾಸ ದೊಡನೆ ಶರಣರ ಕಾಯಕ ಧರ್ಮವನ್ನು ಸರಳ ಸಾಹಿತ್ಯದ

ಮೂಲಕ ಪ್ರಸಾರ ಮಾಡಬೇಕಾಗಿದೆ. ಈ ಮಹತ್ಕಾರ್ಯದಲ್ಲಿ ತಾವು........!' 'ಈಗಿನಿಂದಲೇ ತಮ್ಮ ಆದೇಶ ಪಾಲಿಸಲು ಸಿದ್ಧರಾಗುತ್ತೇವೆ!' ಎಂದು ತರುಣ ಶಿವಯೋಗಿಗಳು ಕೈ ಮೇಲೆ ಕೈ ಹಾಕುತ್ತ ಸಂತೋಷದಿಂದ ಅಭಯುವನ್ನಿತ್ತರು.

ಹರ್ಡೇಕರ ಮಂಜಪ್ಪನವರಿಗೆ ಅತ್ಯಾನಂದವಾಯಿತು. ನನ್ನ ಬಹುದಿನಗಳ ಸಂಕಲ್ಪ ಈಡೇರಲು ಸಾಧ್ಯವಾಯಿತು. ಪೂಜ್ಯರೇ, ತಾವು ನೀಡಿದ ಅಭಯುದಿಂದ ಸಾವಿರಾರು ಗ್ರಾಮ ಗಳ ಲಕ್ಷಾಂತರ ದೇಶಬಾಂಧವರನ್ನು ಅಜ್ಞಾನದ ಅಂಧಕಾರ ದಿಂದ ಪಾರುಮಾಡುವ ಶಕ್ತಿ ದೊರೆತಂತಾಯಿತು; ಎಂದು ಕೃತಜ್ಞತಾಭಾವ ವ್ಯಕ್ತಪಡಿಸಿದರು.

'ನಮಗೆ ನಮ್ಮ ಧರ್ಮ, ಮಾನವಧರ್ಮ, ರಾಷ್ಟ್ರ ಧರ್ಮ ಬೇಕೆಬೇಕಲ್ಲ ತಮ್ಮಿಂದ ರಾಷ್ಟ್ರ ಧರ್ಮದ ದೀಕ್ಷೆ ಪಡೆಯುವ ಸದವಕಾಶ ಶಿವನ ಒಲುಮೆಯಿಂದ ಒದಗಿಬಂದಿದೆ. ನಮಗೆ ರಾಷ್ಟ್ರ ಧರ್ಮ ದೀಕ್ಷೆ ಕೊಡಿರಿ ಮಹಾತ್ಮರೇ....!' ಎಂದು ಶಿವಯೋಗಿಗಳು ಪ್ರಾರ್ಥಿಸಿದರು.

ಅಂದಿನಿಂದ ಶಿವಯೋಗಿಗಳು ವಿದೇಶಿ ಬಟ್ಟೆಗಳಿಗೆ ಬಹಿಷ್ಕಾರ ಹೇಳಿ. ಶುದ್ಧವಾದ ಖಾದಿಯನ್ನು ಧರಿಸಿದರು. ಜೀವನದ ಅಂತ್ಯದ ವರೆಗೂ ಖಾದಿಬಟ್ಟೆಯನ್ನೇ ಪೋಷಿಸಿದರು-ಪೂಜಿಸಿದರು.

ರಾಷ್ಟ್ರಧರ್ಮ ದೀಕ್ಷೆಯನ್ನು ಮನಃಪೂರ್ವಕ ಸ್ವೀಕರಿಸಿ, ರಾಷ್ಟ್ರಕ್ಕಾಗಿ–ನಾಡಿಗಾಗಿ ಅರ್ಧಶತಮಾನ ಅವಿರತ ಸೇವೆ ಸಲ್ಲಿಸಿದ ಏಕಮೇವ ಮಠಾಧೀಶರು ಇವರಾದರು.

# ಸಮಾಜ ಸುಧಾರಣೆಗಾಗಿ ಸಾತ್ವಿಕ ಸಮರ

ಉತ್ಸಾಹಮೂರ್ತಿ ಬಂಥನಾಳ ಶಿವಯೋಗಿಗಳ ಸಂದರ್ಶನದಿಂದ ಅವರ ಮನದ ಅಭೀಪ್ಸೆಯನ್ನು ಕಂಡುಕೊಂಡ ಹರ್ಡೇಕರ ಮಂಜಪ್ಪನವರು ತುಂಬಾ ಪ್ರಭಾವಿತರಾದರು.

ಈ ಎರಡು ವ್ಯಕ್ತಿಗಳಲ್ಲಿಯ ದಿವ್ಯ ಶಕ್ತಿಯ ಸಂಗಮದಿಂದಾದ ಲಾಭವೆಂದರೆ ಆಲಮಟ್ಟಿಯ ಆಧ್ಯಾತ್ಮ ಹಾಗೂ ಶೈಕ್ಷಣಿಕ ಕೇಂದ್ರಗಳ ಅಭಿವೃದ್ಧಿ. ಈ ಅಭಿವೃದ್ಧಿಯ ಸಾಧನೆ ಸಮಾಜಕ್ಕೆ ಮೀಸಲು. ಉಭಯತರು ಕೂಡಿಕೊಂಡು ಜನಜಾಗೃತಿಗಾಗಿ ಸುಮಾರು ಆರು ತಿಂಗಳ ಕಾಲ ಜಿಲ್ಲೆಯ ಆರು ತಾಲೂಕುಗಳ ೧೫೦ ಪ್ರಮುಖ ಗ್ರಾಮಗಳಲ್ಲಿ ಸಂಚರಿಸಿದರು.

ಸಂಚಾರದ ಉದ್ದೇಶ ಧರ್ಮ ಪ್ರಚಾರ ಮುಖ್ಯವಾಗಿರಲಿಲ್ಲ; ಸದಾಚಾರದ ಸಂಸ್ಥಾಪನೆ. ಅದೊಂದು ಪ್ರಭಾವೀ ಸಮರ. ಜ್ಞಾನ ಪ್ರಸಾರಕ್ಕಾಗಿ, ದೇಶದ ದಾಸ್ಯ ವಿಮೋಚನೆಗಾಗಿ, ಸ್ವದೇಶಾಭಿಮಾನ ಜಾಗೃತಗೊಳಿಸುವದಕ್ಕಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ವಿಭೂತಿ ಪುರುಷರಿಂದ ದಿನವೂ ಪ್ರವಚನ. ಆಲಮಟ್ಟಿಯ ಆಧ್ಯಾತ್ಮ ಕೇಂದ್ರಕ್ಕೆ ಉಳ್ಳವರಿಂದ ಕಾಣಿಕೆ ಹಾಗೂ ಬೆಂಬಲದ ಸ್ವೀಕಾರ!

ಸಾವಿರಾರು ಜನಸಾಮಾನ್ಯರು ಬಂಥನಾಳ ಶಿವಯೋಗಿಗಳ ದರ್ಶನ, ಪ್ರವಚನಗಳಿಂದ ಪುನರುಜ್ಜೀವನ ಪಡೆಯುವಂತಾಯಿತು. ಅನುಭಾವಿ ಹರ್ಡೇಕರ ಮಂಜಪ್ಪನವರನ್ನು ದೇಶಾಭಿಮಾನವೆ ಮೂರ್ತಿವೆತ್ತ ದ್ವಿತೀಯ ಗಾಂಧಿಯನ್ನು

ಕಣ್ಣಾರೆ ಕಂಡು, ಅನುಭವವಾಣಿಯನ್ನಾಲಿಸಿ ಗ್ರಾಮಾಂತರ ಜನರು ಧನ್ಯರಾದರು. ಅವರು ಕೈಕೊಂಡ ವಿಧಾಯಕ ಕಾರ್ಯಗಳಿಗೆ ವಿಜಾಪುರ ಜಿಲ್ಲೆಯ ಡೋಣಿ ಸಾಲಿನ ಶ್ರೀಮಂತರು ಕೈತುಂಬಾ ಕಾಣಿಕೆಯನ್ನಿತ್ತು ಕೃತಾರ್ಥ ರಾದರು.

ಬಂಥನಾಳ ಶಿವಯೋಗಿಗಳನ್ನು ಕುರಿತು ಹರ್ಡೇಕರ ಮಂಜಪ್ಪನವರು ತಮ್ಮ ಆತ್ಮಚರಿತ್ರೆಯಲ್ಲಿ ವ್ಯಕ್ತಪಡಿಸಿದ ನುಡಿಮುತ್ತುಗಳು ಈ ಸಂದರ್ಭದಲ್ಲಿ ಉಲ್ಲೇಖನೀಯ:

"೧೯೨೩ ನವ್ಹಂಬರ ೧೮ರಂದು ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಬಂಥನಾಳ ಸಂಗನಬಸವ ಶಿವಯೋಗಿಗಳ ವರ ದರ್ಶನವಾಯಿತು. ಇದು ಅವರ ನನ್ನ ಪ್ರಥಮ ಸಂದರ್ಶನ. ಮಹಾ ತೇಜೋಮೂರ್ತಿಗಳವರೆಂದು ಆಗಲೆ ನಾನು ಗ್ರಹಿಸಿದೆನು.

ವೀರಶೈವರಲ್ಲಿಯ ಒಳಪಂಗಡಗಳನ್ನು ತೆಗೆದು ಹಾಕಲು ಬಂಥನಾಳ ಮಠದಲ್ಲಿ ಶ್ರಾವಣಮಾಸ ಒಂದು ತಿಂಗಳು ಬಸವಣ್ಣನವರ ಪ್ರವಚನ ಮೂಲಕ ಪ್ರಚಾರ ಮಾಡಿದೆನು. ನೂರಾರು ಜನ ಸ್ತ್ರೀ-ಪುರುಷರಿಗೆ ಲಘು ದೀಕ್ಷೆಯನ್ನು ಮಾಡಿದ್ದಾಯಿತು.

ಶಿವಯೋಗಿಗಳು ಮತ್ತು ನಾನು ಜಿಲ್ಲೆಯ ಐದು ತಾಲೂಕುಗಳ ಹಳ್ಳಿಗಳಲ್ಲಿ ಸತತ ಸಂಚರಿಸಿದೆವು. ತಂಬಾಕು ತಿನ್ನುವದು, ಚಹಾ ಕುಡಿಯುವದು ಸಲ್ಲದೆಂದು ಮನದಟ್ಟು ಮಾಡಿದೆವು. ಎಲ್ಲರೂ ಖಾದಿ ಧರಿಸಲು ಬಿನ್ನವಿಸಿದೆವು. ಶರಣರ ಕಾಯಕ ಧರ್ಮವನ್ನು ಮಹಾತ್ಮರ ದೇಶಾಭಿಮಾನದ

ಸಂದೇಶವನ್ನು ಊರೂರಿಗೆ ತಲುಪಿಸಿದೆವು. ಸಾವಿರಾರು ಜನರ ಶಿವಯೋಗಿಗಳ ಸನ್ನಿಧಿಯಲ್ಲಿ ಶರಣರ ತತ್ವ ಪಾಲಿಸುವುದಾ ಪ್ರಾಮಾಣಿಕ ಪ್ರತಿಜ್ಞೆಗೈದರು.

ಶಿವಯೋಗಿಗಳವರ ಬಗೆಗೆ ಹೋದಲ್ಲೆಲ್ಲ ಆದರಾಭಿಮಾ ಗಳಿದ್ದಕಾರಣ ನಮ್ಮ ಉಪದೇಶ ಫಲಕಾರಿಯಾಯಿತು ಊರೂರುಗಳಲ್ಲಿ ಬಿಟ್ಟುಕೊಟ್ಟ ಚಿಲುಮೆ, ತಂಬಾಕಿನ ಗಂಟ ಗಳನ್ನು ಒಟ್ಟುಗೂಡಿಸಿ ತಂದು ಬಂಥನಾಳದಲ್ಲಿ ಅಗ್ನಿಗಾಹು ಮಾಡಿದೆವು. ವಿಧಾಯುಕ ಕಲ್ಯಾಣ ಕಾರ್ಯಗಳಲ್ಲಿ ಸ್ವಾಮಿ ಗಳಿಗೆ ತುಂಬಾ ಆಸಕ್ತಿ ಮತ್ತು ಉತ್ಸಾಹ.

ಯೋಗ್ಯವಾದ ಸ್ಥಳದಲ್ಲಿ ಆಶ್ರಮ ಕಟ್ಟಲು ನಾನ ಚಿಂತಿಸಿದೆ. ಆಗ ಬಂಥನಾಳ ಶಿವಯೋಗಿಗಳು ಮುಂದೆ ಬಂದ ಆಲಮಟ್ಟಿಯೇ ಯೋಗ್ಯ ಸ್ಥಳವೆಂದು ತೋರಿಸಿದರು. ಅವ ಕೃಪೆಯಿಂದಲೇ ಆಲಮಟ್ಟಿಯಲ್ಲಿ ನನ್ನ ಆಶ್ರಮಜೀವನ ಆರಂ ವಾಯಿತು.

ಆಲಮಟ್ಟಿಯಲ್ಲಿ ವೀರಶೈವ ವಿದ್ಯಾಲಯ ಸ್ಥಾಪನೆಗಾ ಬಂಥನಾಳ ಶಿವಯೋಗಿಗಳು, ರಾವಬಹಾದ್ದೂರ ಫ. ಗು. ಹ ಕಟ್ಟಿಯವರು ನನಗೆ ತುಂಬಾ ನೆರವಾದರು. ೧೯೨೭ರ ವೀರಶೈವ ವಿದ್ಯಾಲಯ ಸ್ಥಾಪನೆಯಾಯಿತು. ವಿದ್ಯಾಲಯ ಸಂರಕ್ಷಕ ಮಂಡಲದ ಅಧಿಪತಿಗಳೆಂದು ಸರ್ವಾನುಮತದಿಂ ಬಂಥನಾಳ ಶಿವಯೋಗಿಗಳನ್ನು ಆರಿಸಲಾಯಿತು."

ಸ್ವಾತಂತ್ರ್ಯ ಹೋರಾಟಕ್ಕಿಳಿದ ಜಿಲ್ಲೆಯ ಯೋಧ ಬಡಕುಟುಂಬಗಳಿಗೆ ಬಂಥನಾಳ ಶ್ರೀಗಳು ವರ ಹಸ್ತವನ

ಮುಂದೆ ಮಾಡಿದರು. ಅಂಥ ಬಡಕುಟುಂಬಗಳಿಗೆ ದವಸ ಧಾನ್ಯ, ಒಟ್ಟಿಬರೆ ಆಳರಸರಿಗೆ ತಿಳಿಯದ ಹಾಗೆ ಮಠದ ಕಾರ್ಯಕರ್ತರಿಂದ ಕಾಲಕಾಲಕ್ಕೆ ಪೂರೈಸಿದರು. ಭೂಗತ ವಾದ ಸ್ವಾತಂತ್ರ್ಯ ಹೋರಾಟಗಾರರಿಗೆ ಬಂಥನಾಳ ಮಠದಲ್ಲಿ ಗುಪ್ತ ಆಶ್ರಯ ಅಭಾಧಿತವಾಗಿ ದೊರೆಯಿತು. ಬ್ರಿಟೀಷರ ವಿರುದ್ಧ ಪ್ರಚಾರ ಮಾಡುತ್ತಿದ್ದಾರೆಂಬ ಗುಪ್ತ ವಾರ್ತೆಯನ್ನು ಪರಿಶೀಲಿಸಲು ಬಂದ ಅಧಿಕಾರಿಗಳು ಶಿವಯೋಗಿಗಳವರ ಪ್ರಭಾವ ಪ್ರಸಾದಗಳಿಗೆ ಮೂಕವಿಸ್ಮಿತರಾಗಿ ಶರಣಾಗತರಾಗಿ ಹೋದುದನ್ನು ಅವರ ಸಮಕಾಲೀನ ಸಂಗಡಿಗರು ಈಗಲೂ ಕಥೆ ಮಾಡಿ ಕಣ್ಣಿಗೆ ಕಟ್ಟುವಂತೆ ವಿವರಿಸುತ್ತಾರೆ.

ವಿಜಾಪೂರ ಜಿಲ್ಲೆಯ ಅಂದಿನ ಸ್ವಾತಂತ್ರ್ಯ ಹೋರಾಟ ಗಾರರಲ್ಲಿ ಮುಂದಾಳ್ತನ ವಹಿಸಿದ ಅಂಬಲಿಚೆನ್ನಬಸಪ್ಪ, ಕೌಜ ಲಗಿ ಹಣಮಂತರಾಯ, ಸುಗಂಧಿ ಮುರಿಗೆಪ್ಪಣ್ಣ, ರಾಜಾ ರಾಜಾರಾಮ ದುಭೆ, ಎಸ್. ಆರ್. ಕಂಠಿ, ವೆಂಕಟರಾಯ ನಾಯಿಕ, ಕಣಬೂರ ವಕೀಲರು ಮೊದಲಾದ ಹಿರಿಯರು ದೇಶಾಭಿಮಾನಿ ರಾಷ್ಟ್ರಪ್ರೇಮಿ ಬಂಥನಾಳ ಶಿವಯೋಗಿಗಳವರ ಪ್ರೇರಣೆ, ಪ್ರೋತ್ಸಾಹ, ಮಾರ್ಗದರ್ಶನ ಪಡೆದು ಮುನ್ನಡೆದರು.

ಸ್ವಾತಂತ್ರ್ಯ ಪ್ರಾಪ್ತಿಯಾದ ಬಳಿಕ ಈ ಮುಖಂಡರು ಶಿವಯೋಗಿಗಳವರ ಸಂಪರ್ಕದಿಂದ ಸಾಮಾಜಿಕ ಉನ್ನತಿಗಾಗಿ ಮಾರ್ಗದರ್ಶನ ಪಡೆದರು. ಶಿವಯೋಗಿಗಳವರ ಅಪ್ಪಣೆ ಎಂದರೆ ಇವರೆಲ್ಲರಿಗೆ ಅತ್ಯಂತ ಸ್ವಾಗತಾರ್ಹವಾಗಿ ಪರಿಣಮಿ ಸಿತು. ಮಠದ ಜಾತ್ರೆ ಉತ್ಸವಗಳಲ್ಲಿ ಯಾರಾದರೊಬ್ಬ

ಕಾಂಗ್ರೆಸ್ ರಾಜಕೀಯ ಮುಖಂಡರನ್ನು ಆಹ್ವಾನಿಸಿ ಶ್ರೀಗಳ
ವರು ಜಿಲ್ಲೆಯ ಸಮಸ್ಯೆಗಳ ಪರಿಹಾರಕ್ಕಾಗಿ ಚರ್ಚಿಸುವುದ
ವಾಡಿಕೆಯಾಗಿತ್ತು. ಯಾವ ಸ್ವಾರ್ಥ–ರಾಜಕೀಯ ಅವರಲ್ಲಿ
ರಲಿಲ್ಲ. ಜನಹಿತದ ಕಾರ್ಯಕ್ಕಾಗಿ ಸದಾ ಚಿಂತನೆ ಹಂಬಲ
ಅವರಿಗೆ. ಮಂತ್ರಿಗಳ ರಾಜ್ಯಪಾಲರ ಸುಮಧುರ ಸಂಪರ್ಕ
ಇರುವುದರಿಂದ ಬಂಥನಾಳ ಶಿವಯೋಗಿಗಳನ್ನು ಕೆಲವರು
'ಕಾಂಗ್ರೆಸ್ ಸ್ವಾಮಿಗಳು' ಎಂದು ತೆರೆಯ ಮರೆಯಲ್ಲಿ ಆಡಿ
ಕೊಂಡಾಗ ಶ್ರೀಗಳು ಅತ್ಯಾನಂದದಿಂದ:

'ನಾನು ರಾಜ್ಯ, ರಾಷ್ಟ್ರ ಬಿಟ್ಟು ಬದುಕುತ್ತಿಲ್ಲ. ಪವಿತ್ರ
ವಾದ ಕಾಂಗ್ರೆಸ್ ಸಂಸ್ಥೆಯ ಅತ್ಯಂತ ಅಭಿಮಾನಿ ನಾನು
ಯಾವ ಸಂಸ್ಥೆಯಿಂದ, ಯಾವ ಉದಾತ್ತ ತತ್ವಗಳಿಂದ ನಾವು
ಸ್ವತಂತ್ರರಾದೆವೋ ಆ ಸಂಸ್ಥೆಗೆ ಆ ತತ್ವಗಳಿಗೆ ಕೋಟ್ಯಂತರ
ಭಾರತೀಯರ ಜೊತೆಗೆ ನನ್ನ ನಮಸ್ಕಾರಗಳೂ ಸಲ್ಲುತ್ತವೆ
ಮಾತೃಭೂಮಿಗಿಂತ ಮಿಗಿಲಾದುದು ಮತ್ತೊಂದಿಲ್ಲ.' ಹೀಗೆಂದ
ಪ್ರವಚನದಲ್ಲಿ ಘೋಷಿಸಿದ ಪುಣ್ಯಾತ್ಮರವರು.

## ಲಚ್ಯಾಣದಲ್ಲಿ ವಿದ್ಯಾಕೇಂದ್ರದ ಉದಯ

ಶ್ರೀಗಳು ಬಂಥನಾಳ ಮಠದ ಅಧಿಕಾರ ಸ್ವೀಕರಿಸಿದ ಒಂದು ದಶಕದಲ್ಲಿ ಮಠದಲ್ಲಿಯ ಮಾಸಿಕ ಉತ್ಸವಗಳಿಗೆ, ಯಾತ್ರೆಗೆ, ಶ್ರಾವಣದಲ್ಲಿಯ ಪ್ರವಚನಗಳಿಗೆ ಎಂದಿಲ್ಲದ ಕಳೆ ಬಂದಿತು. ಶಿವಯೋಗಿಗಳವರು ಸಾರ್ವಜನಿಕವಾಗಿ ಸಿಕ್ಕುವ ಅವಕಾಶಗಳನ್ನು-ಸಂದರ್ಭಗಳನ್ನು ವಿಧಾಯಕ-ರಚನಾತ್ಮಕ ಸ್ವರೂಪಕೊಟ್ಟು, ತನ್ಮೂಲಕ ಜನಬಲ-ಧನಬಲಗಳನ್ನು ಸಂಘಟಿಸಿ, ಅದರಿಂದ ಸಮಾಜಕ್ಕೂ ನಾಡಿಗೂ ಶಾಶ್ವತವಾದ ಲಾಭ ತಟ್ಟುವಂತೆ ಪ್ರಯತ್ನಿಸುವುದರಲ್ಲಿ ಹಿಂದೆ ಮುಂದೆ ನೋಡರು. ವೈಗಳ್ಳರು, ಸಂಕುಚಿತ ವಿಚಾರದವರು ಏನೇ ಟೀಕೆ ಮಾಡಿದರೂ ಅತ್ತ ಲಕ್ಷಕೊಡರು. ಒಳ್ಳೆಯ ಕಾರ್ಯ ನೆರವೇರಿಸಲು ಎದುರಾಗುವ ಅಡ್ಡಿ ಆತಂಕಗಳನ್ನು ಉದಾಸೀನ ಭಾವದಿಂದ ತಿರಸ್ಕರಿಸುವ ತಾಳ್ಮೆ-ಆತ್ಮಬಲ ತರುಣ ಶಿವಯೋಗಿಗಳಲ್ಲಿಯ ಗುಣ ವಿಶೇಷ.

ಬಂಥನಾಳ, ಲಚ್ಯಾಣ, ಬೋಳೆಗಾವಿ, ಕೃಷ್ಣಾ (ರಾಯಚೂರ), ಹಡಪಸರ (ಪುಣೆ) ಮೊದಲಾದ ಮೂಲ ಮತ್ತು ಶಾಖಾ ಮಠಗಳ ಯಾತ್ರೆಗಳಿಗೆ ರಾಷ್ಟ್ರೀಯತೆಯನ್ನು ಜಾಗೃತಗೊಳಿಸುವ, ಸಾಂಸ್ಕೃತಿಕ ಪರಂಪರೆಯನ್ನು ಮೆರೆಯಿಸುವ, ಶರಣರ ವಾಙ್ಮಯವನ್ನು ಬಿತ್ತರಿಸುವ ವಿವಿಧ ಕಾರ್ಯಕ್ರಮಗಳನ್ನು ಕಡ್ಡಾಯಗೊಳಿಸಿದರು. ಶಾಲಾ ಮಕ್ಕಳ, ಶಕ್ತಿ ಪ್ರದರ್ಶನ ಮಾಡುವ ಪೈಲವಾನರ, ಬೇಸಾಯದ-ಬೆಳೆಗಳ

ಪ್ರಾತ್ಯಕ್ಷಿಕೆಗಳ ಹಾಗೂ ದನಗಳ ಪ್ರದರ್ಶನಗಳನ್ನು, ಸ್ಪರ್ಧಾತ್ಮಕ ಚಟುವಟಿಕೆಗಳನ್ನು ಜಾತ್ರೆಗಳಲ್ಲಿ ಪ್ರಾರಂಭಿಸಿ ನಗದು ಬಹುಮಾನ ಮತ್ತು ಪ್ರಶಸ್ತಿ ಪತ್ರಗಳನ್ನು ನೀಡಲು ಪ್ರಾರಂಭಿಸಿದರು. ಕವಿ ಸಮ್ಮೇಲನ, ವಿದ್ವಾಂಸರ ಚರ್ಚಾಗೋಷ್ಠಿಗಾಗಿ 'ಅನುಭವ ಮಂಟಪ'ದ ಕಾರ್ಯಕ್ರಮಗಳು ರೂಪಗೊಂಡುದು ಆಗಿನಿಂದಲೇ. ಮಾನ್ಯರಾದ ಹಳಕಟ್ಟಿ ಮತ್ತು ಹರ್ಡೇಕರರ ಮಾರ್ಗದರ್ಶನಗಳಿಂದ ಶಿವಯೋಗಿಗಳವರಲ್ಲಿ ಸಾಮಾಜಿಕ, ಧಾರ್ಮಿಕ ಮತ್ತು ರಾಷ್ಟ್ರೀಯ ಪ್ರಜ್ಞೆಗಳ ತ್ರಿವೇಣಿ ಸಂಗಮವಾಗಿ ಯಾವ ವಿಶ್ವವಿದ್ಯಾಲಯಗಳೂ ಕೊಡಲಾರದಂತಹ ಅಪೂರ್ವ ವಿದ್ಯೆಯನ್ನು-ಅನುಭಾವವನ್ನು ಅವರು ಉಭಯ ವಿಭೂತಿ ಪುರುಷರಿಂದ ಪಡೆದರು.

ಊರೂರಿಗೆ ಉಚಿತಪ್ರಸಾದ ನಿಲಯಗಳು ನಿರ್ಗತಿಕ ವೃದ್ಧರಿಗಾಗಿ ರೂಪುಗೊಂಡರೆ, ಭಕ್ತಿ ಭಾವ ಬಿತ್ತಿ ಬೆಳೆಯಲು ಭಜನಾಮಂಡಳಿಗಳನ್ನು ಪ್ರಾರಂಭಿಸಲು ಉತ್ತೇಜನವಿತ್ತರು. ಗರಡಿ ಸಾಧನೆಗೆ ಪ್ರಚೋದಿಸಿ ಗ್ರಾಮಗಳಲ್ಲಿ ವ್ಯಾಯಾಮ ಶಾಲೆ ತಲೆ ಎತ್ತಲು ಊರ್ಜಿತಗೊಳ್ಳಲು ಉಚಿತ ಕಾಣಿಕೆಗಳನ್ನು ದಯಪಾಲಿಸಿದರು.

೧೯೨೭ರಲ್ಲಿ ಸುಕ್ಷೇತ್ರ ಲಚ್ಯಾಣದ ಶ್ರೀ ಸಿದ್ಧಲಿಂಗ ಮಹಾರಾಜರು ಭವಿಷ್ಯ ಸಂದೇಶವನ್ನಿತ್ತು ಶಿವನನ್ನು ಸೇರಿದರು. ಆಗ ಅವರು ಭಕ್ತ ಮಂಡಳಿಗೆ ಅಭಯವನ್ನೀಯುತ್ತ:

'ನನ್ನ ಮಕ್ಕಳೇ ನಾನು ಹೋಗುವೆನೆಂದು ನೀವ್ಯಾರೂ ಚಿಂತಿಸಬಾರದು. ನಮ್ಮೆಲ್ಲರನ್ನು ಕರುಣೆಯಿಂದ ಕಾಪಾಡುವ

ಕರುಣಾಮೂರ್ತಿ ಸದ್ಗುರು ಬಂಥನಾಳೇಶನಿದ್ದಾನೆ. ಅವನ ಪಾದ ಸ್ಪರ್ಶದಿಂದ ಲಚ್ಯಾಣದ ಭಾಗ್ಯ ತೆರೆಯುವದು. ನಂಬಿ ನಡೆಯಿರಿ. ಈ ಕ್ಷೇತ್ರ ವಿದ್ಯಾಕ್ಷೇತ್ರ ಆಗುವದು. ಬ-ಥನಾಳದ ಗುರುವರನು ಕಾಪಾಡುವನು' ಹೀಗೆಂದು ಸಂದೇಶವಿತ್ತರು. ಅವರ ಸಂದೇಶ ಕಾಲಜ್ಞಾನ ಈಡೇರಲು ಬಹಳ ಕಾಲ ಬೇಕಾಗಲಿಲ್ಲ.

ಬಂಥನಾಳ ಶಿವಯೋಗಿಗಳಿಗೆ ಲಚ್ಯಾಣದ ಭಕ್ತರೆಂದರೆ ಅವರ ಜೀವನದ ಪರ್ಯಂತರ ಅಚ್ಚುಮೆಚ್ಚು. ವರುಷದಲ್ಲಿ ಎರಡು ಸಲ ಉತ್ಸವಗಳು. ಶ್ರೀ ಶಂಕರಲಿಂಗರ ರಥೋತ್ಸವ ತುಂಬಾ ಪ್ರಸಿದ್ಧಿ. ಅದು ಸಿದ್ಧಲಿಂಗ ಮಹಾರಾಜರೇ ಪ್ರಾರಂಭಿಸಿದ ಉತ್ಸವ. ಅವರು ದೇಹ ಬಿಟ್ಟ ಬಳಿಕ ನಡೆದುದು ಸಿದ್ಧಲಿಂಗರ ಪುಣ್ಯತಿಥಿ ಉತ್ಸವ. ಪ್ರಾರಂಭದಿಂದಲೂ ಸನ್ಯಾಸಿಯ ಮಠ; ಜಾತ್ಯತೀತ ಆಚಾರ. ನಿತ್ಯ ದಾಸೋಹ. ಬೇಡಿಕಾಡುವುದು ಸಿದ್ಧಲಿಂಗರ ಸಂಪ್ರದಾಯವಲ್ಲ. ನಂಬಿದ ಸಹಸ್ರಾರು ಭಕ್ತರ ಮುಕ್ತಹಸ್ತದ ಕಾಣಿಕೆಗಳಿಗೆ ಅಲ್ಲಿಯ ಕಾಳಿನ ಕಣಜವೆಂದರೆ ಅಕ್ಷಯ ಪಾತ್ರೆ; ಕಾಮಧೇನು; ಕಲ್ಪವೃಕ್ಷ. ಅಂದು ಸ್ಮಶಾನ–ರುದ್ರಭೂಮಿ. ಇಂದು ಸುಕ್ಷೇತ್ರ ಪುಣ್ಯಭೂಮಿ.

ಸುಕ್ಷೇತ್ರ ಲಚ್ಯಾಣವನ್ನು ಅಧುನೀಕರಿಸಲು ಬಂಥನಾಳ ಶಿವಯೋಗಿಗಳವರ ಮನದಲ್ಲಿ ಬಲವಾದ ಹಂಬಲ ಹಾರೈಕೆ. ಅವರ ಸದಾಶಯ ಈಡೇರಲೆಂದು ೧೯೩೨ರಲ್ಲಿ ಆರು ತಿಂಗಳ ಉಗ್ರ ತಪವನ್ನಾಚರಿಸಲು ಅಣಿಯಾದರು. ಲಚ್ಯಾಣದ 'ಕಮರೀಮಠ' ಧ್ಯಾನ ಮಂದಿರದಲ್ಲಿ ಶಿವಯೋಗಿಗಳ ಅನುಷ್ಠಾನ ಪ್ರಾರಂಭವಾಯಿತು.

ಅನುಷ್ಠಾನದ ಮುಕ್ತಾಯದ ನಂತರ ಶ್ರಾವಣದಲ್ಲಿ ಲಚ್ಯಾಣ ಮಠದಲ್ಲಿ ಶಿವಯೋಗಿಗಳವರಿಂದ ಬಸವಪುರಾಣ ಪ್ರಾರಂಭವಾಯಿತು. ಮೂವತ್ತೆರಡು ವಯಸ್ಸಿನ ಅಪೂರ್ವವಾದ ಆಕರ್ಷಕವಾದ ವ್ಯಕ್ತಿತ್ವಕ್ಕೆ ಇಂಪಾದ ಶ್ರೀಕಂಠ, ಗ್ರಾಮೀಣ ಜನಮನ ಸೂರೆಗೊಳ್ಳುವ ಮಾತುಗಾರಿಕೆಗಳು ವಿಶೇಷತೆಯನ್ನುಂಟುಮಾಡಿದವು. ಆರು ತಿಂಗಳ ಅವಧಿಯ ಸಾಧನೆಯ ಸತ್ವ-ಬಲ-ಪ್ರಕಾಶಗಳು ಅವರ ಮುಖದಲ್ಲಿ ಮಹಾ ಪ್ರಸನ್ನತೆಯನ್ನು ಪ್ರಕಾಶಿಸಿದವು. ಬಸವಪುರಾಣ ಕೇಳಲು ಇಂಡಿ ತಾಲೂಕಿನ ನೂರಾರು ಗ್ರಾಮಗಳ ಭಕ್ತರು ಲಚ್ಯಾಣಕ್ಕೆ ಬರಹತ್ತಿದರು. ನಿತ್ಯ ಬರುವ ಸಾವಿರಾರು ಭಕ್ತರಿಗೆ ದಾಸೋಹದಲ್ಲಿಯ ಪ್ರಸಾದವು ತನು ಮನ ತಣಿಸಿ ಮುಗ್ಧಗೊಳಿಸುವಂತಾಯಿತು.

ತಿಂಗಳುಗಟ್ಟಲೆ ನಡೆದ ತಮ್ಮ ಪ್ರವಚನದಲ್ಲಿ ಸ್ವಾಮಿಗಳವರು ಗ್ರಾಮೀಣ ಜನತೆಯಲ್ಲಿಯ ಪರಸ್ಪರ ವೈರತ್ವ, ಅಸೂಯೆ, ಅಜ್ಞಾನ, ಜಾತೀಯತೆ, ದಾಸ್ಯಜೀವನ, ಅತ್ಯಾಚಾರ, ಜಿಪುಣತನಗಳೆಂಬ ಹೀನ ಗುಣಗಳನ್ನು ತೊಡೆದು ಹಾಕಲು ಪ್ರಯತ್ನಿಸಿದರು. ಸಮಯೋಚಿತವಾದ ಕಥೆಗಳನ್ನು ಶರಣರ ಕಾಯಕ ಧರ್ಮವನ್ನು, ಬಸವತತ್ವದ ಇಂಗಿತವನ್ನು ಜನಮನದಲ್ಲಿ ಶಾಶ್ವತವಾಗಿ ನೆಲೆಯೂರುವಂತೆ ಬೋಧಿಸಿದರು. ತಮ್ಮ ಹಾಸ್ಯಭರಿತವಾದ ಶೈಲಿಯಿಂದ ಜನಮನ ಅರಳಿಸಿದರು. ಕೃಪಣರಲ್ಲಿ ಔದಾರ್ಯವನ್ನು ಕುದುರಿಸಿ, ಸತ್ಕಾರ್ಯಗೆ ಮನಮುಟ್ಟಿ ದಾನ ಮಾಡುವಂತೆ ಪ್ರೇರೇಪಿಸಿದರು.

ವರು ನೇರವಾಗಿ ಸಹಸ್ರಾರು ಶ್ರೋತೃಗಳನ್ನು ಪ್ರಶ್ನಿಸುವ
ತಿ ಆಕರ್ಷಕವಾದುದು:

'ಊರ ಕಾರಭಾರ ಮಾಡುವ ಹಿರಿಯಣ್ಣಗಳಿರಾ,
ಡರಾಗಿ ಗ್ರಾಮದ ಹಿರಿತನ ಹೊತ್ತು ಮೆರೆಯುವ ಬಂಧು
ಿರಾ, ದುಡ್ಡಿಗೆ ದುಡ್ಡು, ಬಡ್ಡಿಗೆ ಬಡ್ಡಿ ಲೆಕ್ಕ ಹಾಕುವ ಶೆಟ್ಟಿ
ಾಹುಕಾರರೆ, ನನ್ನಪ್ಪಗಳಿರಾ ನಿಮ್ಮಲ್ಲಿ; ನೀವು ತಿಳಿದು
ೋಡಿರಿ! ಬರುವಾಗ ಏನೇನು ತಂದಿರುವಿರಿ? ಸಾವಿನ ಬುತ್ತಿ
ುತ್ತೇ ಬಂದಿರುವಿರಿ! ಹೋಗುವಾಗ ಏನೇನು ಒಯ್ಯುತ್ತೀರಿ?
ಾಲ ಮನೆ, ಹೆಂಡರು ಮಕ್ಕಳು, ಬಂಧು ಬಳಗ, ದುಡ್ಡು
ಲತ್ತುಗಳನ್ನೆಲ್ಲ ನಂಬಿಕೊಂಡು ನರಳುತ್ತ, ಎಲ್ಲವನ್ನೂ
ಟ್ಟು. ಖೊಟ್ಟಿತನಕ್ಕೆ ಹೆಸರಾಗಿ ಉಟ್ಟ ಬಟ್ಟೆಯನ್ನು ಕಸಿದು
ಾಳ್ಳುವರೆಂಬ ಅರಿವಿಲ್ಲದೆ ಸತ್ತು ಹೋಗುವಿರಲ್ಲ! ಸಂಸಾರ
ಬುವದೊಂದು ಗಾಳಿಯ ಸೊಡರು. ಸಿರಿ ಎಂಬುದು
ತೆಯ ಜನ. ಇದನೆಚ್ಚಿ ಕೆಡಬಾರದೆಂದು ಶರಣರು ಹೇಳು
ತ್ತರೆ! ಕಾಗೆ ಕೋಳಿಗಳು ಕೂಡಿ ತಿಂದು, ಕೂಡಿ ಉಂಡು
ಳುತ್ತವೆ. ನೀವಾದರೋ ಒಡಕಿನಲ್ಲಿ ಸ್ವಾರ್ಥದಲ್ಲಿ ದಿನ
ಳೆದು ಅವುಗಳಿಗಿಂತ ಕೀಳಾಗಿ ಜೀವನವನ್ನು ಹಾಳುಮಾಡಿ
ಾಳ್ಳುವಿರಲ್ಲ! ಸತ್ಕಾರ್ಯ, ಸನ್ಮಾರ್ಗ, ಸರಳ ಜೀವನ, ಸಹ
ೀವನ ಮಾನವನಿಗೆ ಭೂಷಣ. ಇದರಿಂದಲೇ ಸದ್ಗತಿ ಪ್ರಾಪ್ತಿ.
ವೀಗ ಬಸವ ಪುರಾಣ ಕೇಳಿ ಪುನೀತರಾಗಿದ್ದೀರಿ. ನಿಮ್ಮ
ರ ಪ್ರೇರಣೆಯಿಂದ ಲಚ್ಯಾಣದ ಈ ಸುಕ್ಷೇತ್ರದಲ್ಲಿ ಅರವ
ಮ್ಮರು ಪುರಾತನರ ಪೂಜಾ ಸಮಾರಂಭ ಏರ್ಪಡಿಸಲೇ?'

ಎಂದು ಅವರ ಪ್ರಶ್ನೆ. ಸಾವಿರಾರು ಕಂಠಗಳಿಂದ ಒಪ್ಪಿಗೆಯ ದನಿ; ಕರತಾಡನ, ಲಚ್ಯಾಣದಲ್ಲಿ ವಿದ್ಯಾಕೇಂದ್ರಗಳ ಉದಯಕ್ಕೆ ಇದುವೆ ನಾಂದಿಯಾಯಿತು.

೧೯೩೩ರಲ್ಲಿ ಸುಕ್ಷೇತ್ರ ಲಚ್ಯಾಣದಲ್ಲಿ ಜರುಗಿದ ಅರವತ್ಮೂರು ಪುರಾತನರ ಮಂಟಪ ಪೂಜಾ ಸಮಾರಂಭ ಒಳ್ಳೆಯ ವೈಭವದಿಂದ ಜರುಗಿತು. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶಗಳ ಮಠಾಧೀಶರು, ಸಾಧು ಸಂತರು ಈ ಸಮಾರಂಭದಲ್ಲಿ ಪಾಲ್ಗೊಂಡರು.

ಶಿವಯೋಗಿಗಳವರ ಉಪದೇಶದಿಂದ ಸಂತುಷ್ಟರಾದ ಗ್ರಾಮೀಣ ಜನತೆ ಧವಸ ಧಾನ್ಯ, ಧನ ಕನಕಗಳನ್ನು ಮುಕ್ತ ಹಸ್ತದಿಂದ ಈ ಸಮಾರಂಭಕ್ಕೆ ಕಾಣಿಕೆಯಾಗಿ ಅರ್ಪಿಸಿದರು. ಸುಮಾರು ೫೦ ಸಾವಿರ ಯಾತ್ರಿಕರು ಭಾಗವಹಿಸಿದ ಮಹಾ ಸಮಾರಂಭದಲ್ಲಿ ತಿಂದುಂಡು ಉಳಿದ ಧನವನ್ನು ಸುಕ್ಷೇತ್ರ ಲಚ್ಯಾಣದಲ್ಲಿ ಮುಂದೆ ಪ್ರಾರಂಭಿಸಲು ಸಂಕಲ್ಪಿಸಿದ್ದ ವಿದ್ಯಾ ಕೇಂದ್ರಗಳ ಕಟ್ಟಡಗಳ ನಿರ್ಮಾಣಕ್ಕೆಂದು ಕಾಯ್ದಿರಿಸಿದರು.

ಯಾವುದೇ ಸ್ಥಳದಲ್ಲಿ ಸಂಗ್ರಹವಾದ ಹಣವನ್ನು ಬೇರೆಡೆಗೆ ಉಪಯೋಗಿಸಲು ಆಗಿನಿಂದಲೇ ಶಿವಯೋಗಿಗಳವರು ನಿರ್ಬಂಧವನ್ನು ಹಾಕಿದರು.

'ನೀವು ಕೊಡುವ ಹಿಡಿ ಅನ್ನವಾಗಲಿ, ಪುಡಿ ಕಾಸಾಗಲಿ ನಿಮ್ಮ ಊರಿನ ಏಳ್ಗೆಗಾಗಿ, ನಿಮಗಾಗಿ, ನಿಮ್ಮ ಪೀಳಿಗೆಗಾಗಿ ನಿಮ್ಮ ದೇಶ ಬಾಂಧವರಿಗಾಗಿ ಮೀಸಲಾಗುತ್ತದೆ. ನನಗೆ ಬೇಕಾದುದು ನಿಮ್ಮ ವಿಶ್ವಾಸ ಮತ್ತು ನಿಮ್ಮೆಲ್ಲರ ಕಲ್ಯಾಣ.

ನಮ್ಮನ್ನು ನಾವು ಅರಿತು ಆಚರಿಸದಿದ್ದರೆ, ನಮ್ಮಲ್ಲಿ ನಂಬಿಗೆ
ಬಂಬುಗೊಳ್ಳದಿದ್ದರೆ ಇತರರನ್ನು ಮೇಲೆತ್ತುವುದೆಂತು?'
ಗೆಂದು ಶಿವಯೋಗಿಗಳವರು ಐದು ದಶಕಗಳ ಹಿಂದೆಯೇ
ಗ್ರಾಮೀಣ ಜನತೆಯಲ್ಲಿ ಕಳಕಳಿಯಿಂದ ಪ್ರಾರ್ಥಿಸಿದರು. ಅವರ
ೋರಿಕೆಗೆ ಜನಬೆಂಬಲ ಪ್ರವಾಹವಾಗಿ ಬಂತು; ಪ್ರಸಾದವಾಗಿ
ರಿಣಮಿಸಿತು. ಈ ಪ್ರಸಾದ ಮಹಿಮೆಯಿಂದ ವಿಜಾಪುರ
ಲ್ಲೆಯಲ್ಲಿ ಜ್ಞಾನದ ನೂರಾರು ಕೇಂದ್ರಗಳನ್ನು ಸ್ಥಾಪಿಸಿದ
ೀಯಸ್ಕರ ಜೀವನ ಅವರದು.

ಲಚ್ಯಾಣದಲ್ಲಿ ಮಾಧ್ಯಮಿಕ ಶಾಲೆ ಮತ್ತು ಪ್ರಾಥಮಿಕ
ಕ್ಷಕರ ತರಬೇತಿ ಕೇಂದ್ರಗಳನ್ನು ಮುಂದೆ ಕೆಲವೇ ವರ್ಷಗಳಲ್ಲಿ
ಸ್ಥಾಪಿಸಿದರು. ಅರವತ್ಮೂರು ಪುರಾತನರ ಪೂಜಾ ಸಮಾ
ಭವೇ ಈ ವಿದ್ಯಾ ಕೇಂದ್ರಗಳ ಸ್ಥಾಪನೆಗೆ ಪ್ರೇರಣೆ ನೀಡಿತೆ
ಬಹುದು. ಶಿವಯೋಗಿಗಳವರ ಸಂಕಲ್ಪಗಳು ಅವರ ಜೀವಿತ
ಲದಲ್ಲಿ ಹುಸಿಯಾದುದಿಲ್ಲ. ಈಡೇರುವ ವರೆಗೆ ಅವರು
ಶ್ರಮಿಸುತ್ತಿರಲಿಲ್ಲ. ಸಾಧನೆಗಾಗಿ ಸತತ ಸಾತ್ವಿಕ ಚಿಂತನೆ
ವರದು.

# ವಿದ್ಯಾರ್ಥಿಗಳೇ ನನ್ನ ದೇವರು

ಆಲಮಟ್ಟಿಯ ಆಧ್ಯಾತ್ಮ ಮತ್ತು ವಿದ್ಯಾ ಕೇಂದ್ರಗ
ಪಾಲನೆ ಪೋಷಣೆಯನ್ನು ಸಮರ್ಥ ರೀತಿಯಿಂದ ಶಿವಯೋ
ಗಳವರು ನಿರ್ವಹಿಸಿದರು. ಕರ್ನಾಟಕದ ಗಾಂಧಿ ಹರ್ಡೇಕ
ಮಂಜಪ್ಪನವರ ಪ್ರಾಮಾಣಿಕ ಮತ್ತು ಸಾತ್ವಿಕ ಜೀವನ
ಅವರ ದೇಶಾಭಿಮಾನದ ಬೆಲೆಯುಳ್ಳ ವಿಚಾರ ಸರಣಿ
ಲಾಭವನ್ನು ನಾಡಿನಾದ್ಯಂತ ಪ್ರಚುರಪಡಿಸಲು ಬಂಥನಾ
ಶಿವಯೋಗಿಗಳು ಬಯಸಿದರು. ವಿದ್ಯಾರ್ಥಿಗಳೇ ಅವರ ಪಾಲಿ
ದೇವರಾಗಿ ಕಂಡರು. ಆಲಮಟ್ಟಿಯಲ್ಲಿ ಓದುವ ವಿದ್ಯಾರ್ಥಿ
ಗಳಿಗಾಗಿ ಉಚಿತ ಪ್ರಸಾದ ನಿಲಯ ಒದಗಿಸಿದರು.

'ಬಸವಲಿಂಗ' ಹೆಸರಿನ ಮುದ್ರಣಾಲಯವನ್ನು ಬಂ
ನಾಳ ಪೀಠದ ಕೊಡುಗೆಯಾಗಿ ಹರ್ಡೇಕರ ಅವರಿಗೆ ನೀ
ದರು. ಇದರಿಂದ ಶರಣರ ತತ್ವಗಳ ಪ್ರಚಾರದ ಪ್ರಕಟನೆಗಳನ
ಹೊರಡಿಸಲು ಅನುಕೂಲವಾಯಿತು. 'ಶರಣರಸಂದೇ
ಮತ್ತು 'ಉದ್ಯೋಗ' ಎಂಬ ಪತ್ರಿಕೆಗಳನ್ನು ಪ್ರಾರಂಭಿಸಿದು
ಆಗಲೇ. 'ದೇವರ ಸಂದೇಶ'ವೆಂಬ ಕೃತಿಯನ್ನು ಶಿವಯೋ
ಗಳು ರಚಿಸಿ ಪ್ರಕಟಿಸಿದರು. ಜೊತೆಗೆ ಗ್ರಾಮಾಂತರ ಸಂಚಾ
ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಲು ಯುವ ಜನಾಂಗ
ಪ್ರೋತ್ಸಾಹಿಸಿದರು. ಅಂದಿನ ಎಳೆಯರಿಗೆ, ಯುವಕರಿ

ಯೋಗ್ಯ ಶಿಕ್ಷಣ ಒದಗಿಸಲು ವಿದ್ಯಾ ಕೇಂದ್ರಗಳ ಸ್ಥಾಪನೆಗಾಗಿ ಗ್ರಾಮೀಣ ಹಿರಿಯರ, ಸಿರಿವಂತರ ನೆರವನ್ನು ಕೋರಿದರು.

ಪ್ರಾಥಮಿಕ ಶಿಕ್ಷಣದ ಸೌಕರ್ಯಗಳು ಸಹ ಇಲ್ಲದ ಅಂದಿನ ಗ್ರಾಮ ಜೀವನದ ಕಾರ್ಗತ್ತಲೆಯಲ್ಲಿ ಜ್ಞಾನ ಜ್ಯೋತಿಯು ತಾವಾಗಿ ಹಗಲಿರುಳೆನ್ನದೆ ವಿದ್ಯಾಪ್ರಸಾರದ ದಿವ್ಯ ಸಂದೇಶವನ್ನು ಊರೂರಿಗೆ ಬಿತ್ತರಿಸಿದರು– ಬಂಥನಾಳದ ಉತ್ಸಾಹಿ ಶಿವಯೋಗಿಗಳು.

೧೯೧೦ರಲ್ಲಿಯೇ ವೀರಶೈವ ಅಭಿಮಾನಿಗಳ ತ್ಯಾಗದ ಮತ್ತು ಉದಾರತೆಯ ಫಲವಾಗಿ ಫ. ಗು. ಹಳಕಟ್ಟಿಯವರ ಜೀವಿತದ ಪ್ರಥಮ ವಿದ್ಯಾಕೇಂದ್ರವಾದ ವಿಜಾಪುರದ ಶ್ರೀ ಸಿದ್ಧೇಶ್ವರ ಹೈಸ್ಕೂಲ ಸ್ಥಾಪನೆಯಾಗಿತ್ತು. ೧೯೨೫ರಲ್ಲಿ ಈ ಮಾಧ್ಯಮಿಕ ವಿದ್ಯಾಲಯದ ಪ್ರಥಮ ತಂಡವೊಂದು ಮ್ಯಾಟ್ರಿಕ್ ಪರೀಕ್ಷೆಯಿಂದ ಮುಂಬಯಿ ರಾಜ್ಯದಲ್ಲಿಯೇ ಉಚ್ಚ ಶ್ರೇಣಿಯನ್ನು ಸಂಪಾದಿಸಿತು. ಆಗ ಉಚ್ಚ ಶಿಕ್ಷಣ ಪಡೆಯಲು ಜಿಲ್ಲೆಯ ವಿದ್ಯಾರ್ಥಿಗಳು ಧಾರವಾಡ, ಬೆಳಗಾವಿ, ಪುಣೆ, ಮುಂಬಯಿಗಳಿಗೆ ಹೋಗುತ್ತಿದ್ದರು. ಉಚ್ಚ ಶಿಕ್ಷಣದ ಸೌಕರ್ಯ ವಿಜಾಪುರದಲ್ಲೇ ಪ್ರಾರಂಭಿಸುವ ಹಿರಿದಾದ ಹಂಬಲ ಅವರದು. ಸಿದ್ಧೇಶ್ವರ ಮಾಧ್ಯಮಿಕ ಶಾಲೆಯ ಸರ್ವಾಂಗೀಣ ಉನ್ನತಿಗಾಗಿ ಅತ್ಯಂತ ನಿಷ್ಠೆಯಿಂದ ನೆರವಿಗೆ ನಿಂತ ಬಂಥನಾಳ ಶಿವಯೋಗಿಗಳು ಉಚ್ಚ ಶಿಕ್ಷಣದ ವಿದ್ಯಾಕೇಂದ್ರ ಸ್ಥಾಪಿಸುವ ಬಗ್ಗೆ ಹಳಕಟ್ಟಿಯವರ ಹಾರೈಕೆಯನ್ನು ಈಡೇರಿಸುವುದಾಗಿ ಅಭಯವನ್ನಿತ್ತರು.

ಶ್ರೀ ಸಿದ್ದೇಶ್ವರ ಸಂಸ್ಥೆಯ ಹಿರಿಯರೆಲ್ಲರೂ ಒಂದುಗೂಡಿ ಬಂಥನಾಳ ಶಿವಯೋಗಿಗಳವರನ್ನು ಪ್ರಾರ್ಥಿಸಿದರು. ವಿಜಾಪುರ ಲಿಂಗಾಯತ ಜಿಲ್ಲಾ ಶಿಕ್ಷಣ ಸಂಸ್ಥೆಗೆ ಪೂಜ್ಯ ಬಂಥನಾಳ ಶಿವಯೋಗಿಗಳವರನ್ನು ಆಜೀವ ಅಧ್ಯಕ್ಷರೆಂದು ಸರ್ವಾನುಮತದಿಂದ ಘೋಷಿಸಿದರು. ೧೯೪೨ ರಿಂದ ಪೂಜ್ಯ ಶಿವಯೋಗಿಗಳವರ ಘನವಾದ ಆಶ್ರಯದಲ್ಲಿ ಈ ಸಂಸ್ಥೆಯು ವಿದ್ಯಾಪ್ರಸಾರ ಜಯಪ್ರದ ದಾಖಲೆಗಳೊಂದಿಗೆ ಮುನ್ನಡೆಯುವಂತಾಯಿತು.

# ವಿಜಾಪುರದಲ್ಲಿ ವಿಜಯ ಕಾಲೇಜ ಸ್ಥಾಪನೆ

೧೯೪೨ರಲ್ಲಿ ವಿಜಾಪುರ ವಿದ್ಯಾ ಸಂಸ್ಥೆಯ ಆಗು ಹೋಗು ಗಳ ಹೊಣೆಯನ್ನು ಆದರಪೂರ್ವಕ ಸ್ವೀಕರಿಸಿದ ಬಳಿಕ, ಶಿವಯೋಗಿಗಳಿಗೆ ಸದಾ ಶಿಕ್ಷಣ ಸಂಸ್ಥೆಯ ಅಭಿವೃದ್ಧಿಯ ಚಿಂತೆ; ಅವರಿಗೆ ಅದೊಂದು ವ್ಯಸನವಾಗಿ ಪರಿಣಮಿಸಿತೆನ್ನ ಬಹುದು. ಜನಮನವನ್ನು ಧಾರ್ಮಿಕ ವಿಚಾರಗಳ ಮೂಲಕ ಶೈಕ್ಷಣಿಕ ಮಹತಿಯತ್ತ ಹೊರಳಿಸಲು ಅವರ ಸದಸದ್ವಿವೇಕ ತನ್ನದೇ ಆದ ವಿಶಿಷ್ಟಮಾರ್ಗವನ್ನು ಕಂಡು ಮುನ್ನಡೆಯಿತು.

ವಿಜಾಪುರದಲ್ಲಿ ಕಾಲೇಜು ಸ್ಥಾಪನೆಯ ಅಗತ್ಯದ ಸಂದೇಶವನ್ನು ಶ್ರೀಗಳು ಊರೂರುಗಳಿಗೆ ತಲುಪಿಸಿದರು. ಕರಪತ್ರಗಳನ್ನು ಭಕ್ತರ ಮನೆ–ಮನೆಗಳಿಗೆ ಮುಟ್ಟಿಸಲಾಯಿತು. 'ವಿದ್ಯಾರ್ಥಿಗಳೇ ನನ್ನ ದೇವರು; ವಿದ್ಯಾಕೇಂದ್ರಗಳೇ ದೇವಾಲಯಗಳು.' ಅವರ ಈ ಅಂತಃಕರಣ ಪೂರ್ಣ ಉಕ್ತಿ ಭಕ್ತರನ್ನು ಆಕರ್ಷಿಸಿ ಎಚ್ಚರಿಸಿತು.

ವಿಜಾಪುರದ ಶ್ರೀಸಿದ್ಧೇಶ್ವರ ದೇವಾಲಯದ ಪಕ್ಕದ ಶಿವಾನುಭವ ಮಂಟಪದಲ್ಲಿ ಅದೇ ವರುಷ 'ಬಸವ ಪುರಾಣ' ಪ್ರವಚನ ಪ್ರಾರಂಭಿಸಿದರು. ಪ್ರವಚನ ಪಟುಗಳೆಂದು ಖ್ಯಾತರಾದ ಅವರ ಅಂದಿನ ಈ 'ಬಸವ ಪುರಾಣ'ದ ಘನವಾದ ಉದ್ದೇಶ ಶೈಕ್ಷಣಿಕ ಕ್ರಾಂತಿಗೆ ನಾಂದಿಯಾಯಿತೆನ್ನಬಹುದು.

ಪ್ರವಚನದ ಕಾಲುಭಾಗ ಭಕ್ತರನ್ನು ಶೈಕ್ಷಣಿಕ ಕ್ರಾಂತಿಗೆ ಎಚ್ಚರಿಸಲು ಸಮಯೋಚಿತ ರೂಪಕಗಳ ಉಲ್ಲೇಖಗಳೊಂದಿಗೆ ಹಾಸ್ಯಭರಿತ ವ್ಯಾಖ್ಯಾನಕ್ಕೆ ಅರ್ಧಭಾಗದಷ್ಟು ವೇಳೆ ಮೀಸಲು. ದೈನಂದಿನ ಪ್ರವಚನದ ಮುಕ್ತಾಯ ಉದಾರ ಕಾಣಿಕೆ-ವಾಗ್ದಾನಗಳ ಮಂಗಲ ಘೋಷಗಳಿಂದ. ಹೀಗೆ ಸುಮಾರು ಮೂರು ತಿಂಗಳಕಾಲ ನಡೆದ ಸುದೀರ್ಘ ಪ್ರವಚನದ ಫಲವಾಗಿ ಕಾಲೇಜು ಸ್ಥಾಪನೆಗೆ ಸಂದಾಯವಾದ ಪುಡಿಕಾಸಿನ ಮೊತ್ತವು: ೪೩೭೭೫೪ ರೂಪಾಯ ಮುಕ್ತಾಯದ ದಿನ ಶಿವಯೋಗಿಗಳ ಸಂದೇಶ ಜಿಲ್ಲೆಯ ಜನ-ಮನವನ್ನು ಅರಳಿಸಿತು:

'ಸದ್ಭಕ್ತರೆ,ವಿಜಾಪುರದಲ್ಲಿ ಶಿವನ ಸಾಕ್ಷಿಯಾಗಿ ಕಾಲೇಜು ಸ್ಥಾಪನೆಯಾಗುತ್ತದೆ. ಈ ಕಾಲೇಜು ನಿಮ್ಮೆಲ್ಲರ ನವಜಾತ ಶಿಶು. ಬಡವಬಲ್ಲಿದರಾದಿಯಾಗಿ ನೀವು ಸಲ್ಲಿಸಿದ ಕಾಣಿಕೆ ನೂತನ ಕಾಲೇಜು ನಿರ್ಮಾಣದ ಅಸ್ತಿವಾರ. ಕೊಡುಗೈ ದೊರೆಗಳಿಗೆ ನಮ್ಮ ಜಿಲ್ಲೆ ಹೆಸರಾಗಿದೆ. ಅಂಥ ಉದಾರಿ ಗೌಡರು, ದೇಸಾಯರು, ಸಿರಿವಂತರು ನಾ ಮುಂದೆ ನೀ ಮುಂದೆ ಎಂದು ಬರಲು ಹವಣಿಸುತ್ತಿರುವರು. ಅವರ ಉದಾರ ಕೊಡುಗೆ ಸ್ವೀಕರಿಸಲು ನನ್ನ ಜೋಳಿಗೆ ಸದಾ ಸಿದ್ಧವಾಗಿದೆ. ನೀವು ಕೊಡುವುದೆಲ್ಲ ನಿಮಗಾಗಿ; ನಿಮ್ಮ ಪೀಳಿಗೆಗಾಗಿ; ನಾಡಿನ ಹಿತಕ್ಕಾಗಿ; ತನ್ಮೂಲಕ ರಾಷ್ಟ್ರದ ಕಲ್ಯಾಣಕ್ಕಾಗಿ' ಎಂದರು.

ವಿಜಾಪುರದಲ್ಲಿಯ ಶ್ರೀಮಂತ ಭಕ್ತರು ದಿನಾಲು ಒಬ್ಬೊಬ್ಬರಾಗಿ ಶಿವಯೋಗಿಗಳವರನ್ನು ಮನೆಗೆ ಬರಮಾಡಿಕೊಳ್ಳುವದು ರೂಢಿ. ಆಗ ಶ್ರೀಗಳು ಕಟ್ಟಪ್ಪಣೆ ಮಾಡಿದರು.

ನಿಮ್ಮ ಮನೆಯಲ್ಲಿ ಅಂಬಲಿಯನ್ನಾದರೂ ಕೊಡಿರಿ, ಪ್ರಸಾದ ನೆಂದು ಸ್ವೀಕರಿಸುವೆ; ಆದರೆ ಕಾಲೇಜ ನಿಧಿಗೆ ೫೦೦ರೂ. ನೊರೆಯದ ದಿನ ನಾನು ಯಾವ ಪ್ರಸಾದವನ್ನು ಸ್ವೀಕರಿಸ ಲಾರೆ!' ಎಂದು. ಈ ಕಾರಣದಿಂದ ಪ್ರತಿದಿವಸ ಕಾಲೇಜ ನಿಧಿಗೆ ೫೦೦ರೂ ದೊರೆತಾಗಲೇ ಅಪ್ಪಗಳು ಪ್ರಸಾದ ಸ್ವೀಕರಿ ಸುತ್ತಿದ್ದರು.

ವಿಜಯ ಕಾಲೇಜ ಸ್ಥಾಪನೆಗೆ ಬಡವರು, ಕೂಲಿಕಾರರು, ವರ್ತಕರು, ನೌಕರರು ಕೊಟ್ಟ ಅಲ್ಪಸ್ವಲ್ಪ ಕಾಣಿಕೆಗಳು ಕಟ್ಟಡ ನಿಧಿಗೆ ಭದ್ರ ಬುನಾದಿಯಾದವು. ಅನಂತರ ಧನಿಕರು ಒಬ್ಬೊ ಬ್ಬರಾಗಿ ಮುಂದೆ ಬಂದರು. ಅಂಥವರಲ್ಲಿ ಅಗ್ರಗಣ್ಯರಾದ ಕೆಲವರನ್ನು ನಾವಿಲ್ಲಿ ಸ್ಮರಿಸಬಹುದಾಗಿದೆ.

ಶ್ರೀಮತಿ ಬಂಗಾರೆವ್ವ ಸಜ್ಜನ ಕಾಲೇಜು ನಿರ್ಮಾಣ ಕ್ಕಾಗಿ ೫೪ ಎಕರೆ ನಿವೇಶನವನ್ನು ಅರ್ಪಿಸಿದರು.

ಕನಾಳ ಗ್ರಾಮದ ಶ್ರೀಮತಿ ಸಿದ್ಧಲಿಂಗಮ್ಮ ಚನಗೌಡ ಪಾಟೀಲ ಈ ತಾಯಿಯು ಪತಿಯ ಸ್ಮಾರಕವೆಂದು ೫೧,೧೧೧ ರೂ. ನಿಧಿಯನ್ನು ಅರ್ಪಿಸಿದರು. ಕೆ. ಪಿ. ಸಿ. ವಿಜ್ಞಾನ ಕಾಲೇ ಜದ ಹೆಸರೂ ಅವರದಾಯಿತು.

ಬ್ಯಾಕೋಡದ ಶ್ರೀ ಹನಮಂತಗೌಡ ಪಾಟೀಲ ಅವರು ಕಾಲೇಜಿನ ಅಭಿವೃದ್ಧಿಗಾಗಿ ೫೧೦೦೦ರೂ. ದೇಣಿಗೆಯನ್ನಿತ್ತರು.

ಯಕ್ಕುಂಡಿಯ ಶ್ರೀ ರಾವುತಪ್ಪ ಕಲ್ಲೊಳ್ಳಿ ಅವರು ೨೫೦೦೦ರೂ. ಸಲ್ಲಿಸಿದರು.

ಚಟ್ಟರಕಿ ಗ್ರಾಮದ ಶ್ರೀಮತಿ ಸಿದ್ದವ್ವ ಬಿರಾದಾರ ತಾಯಿಯವರು ತಮ್ಮ ೧೧ ಜಮೀನುಗಳನ್ನು ವಿದ್ಯಾಸಂಸ್ಥೆಗೆ ಸ್ಥಿರಾಸ್ತಿ ಎಂದು ದೇಣಿಗೆ ಕೊಟ್ಟರು.

ಈ ರೀತಿಯಾಗಿ ಶ್ರೀಗಳವರು ಘನವಂತರಾದ ಭಕ್ತರಿಂದ ಕಾಣಿಕೆಗಳನ್ನು ಸ್ವೀಕರಿಸಿ ಅತ್ಯಲ್ಪ ಕಾಲದಲ್ಲಿ ವಿದ್ಯಾಸಂಸ್ಥೆಗೆ ೧೦,೦೦೦೦೦ (ಹತ್ತುಲಕ್ಷ) ರೂಪಾಯಿ ದಯಪಾಲಿಸಿದರು. ೧೯೪೫ ಜೂನದಲ್ಲಿ ವಿಜಾಪುರದಲ್ಲಿ ವಿಜಯ ಕಾಲೇಜು ಆರಂಭ ವಾಯಿತು.

ಈ ಶೈಕ್ಷಣಿಕ ಕ್ರಾಂತಿಯು ಅಲ್ಲಿಗೆ ನಿಲ್ಲಲಿಲ್ಲ, ಶಿವಯೋಗಿ ಗಳು ವಿಶ್ರಮಿಸಲಿಲ್ಲ. ಶೈಕ್ಷಣಿಕ ಮುನ್ನಡೆಗಾಗಿ ವಾಣಿಜ್ಯ, ವಿಜ್ಞಾನ, ಕಲಾ ವಿದ್ಯಾಲಯಗಳನ್ನು ಪರಿಪೂರ್ಣಗೊಳಿಸಲು ಅವರು ಸತತವಾಗಿ ಪರಿಶ್ರಮಿಸಿದರು. ಅವರ ಕಳಕಳಿಯ ಕರೆಯನ್ನು ಮನ್ನಿಸಿದ ಜಿಪುಣರಲ್ಲಿಯೂ ಔದಾರ್ಯವು ತಾನೆ ತಾನಾಗಿ ಪ್ರಕಟವಾದುದು ಚಿರಸ್ಮರಣೀಯ.

ಸಿಂದಗಿ ತಾಲೂಕಿನ ಮಾದನಹಳ್ಳಿ ಗ್ರಾಮದ ಶ್ರೀ ತುಳ ಜಾರಾಮ ಭವಾನಿ ಮೀನುಗಾರ ಹಿಂದುಳಿದ ಸಮಾಜದ ಭಕ್ತರು ದೇವಣಗಾವದಲ್ಲಿಯ ತಮ್ಮ ೨೦ ಎಕರೆ ಭೂಮಿ ಯನ್ನು ಶ್ರೀಗಳ ಪಾದಗಳಿಗೆ ಸಲ್ಲಿಸಿ ಕೃತಾರ್ಥರಾದರು.

ಶಿವಯೋಗಿಗಳು ತಮಗೆ ವೈಯಕ್ತಿಕವಾಗಿ ಬಂದ ದಕ್ಷಿಣೆ ಯನ್ನು ಸಂಗ್ರಹಿಸಿ ೧೦ ಸಾವಿರ ರೂಪಾಯಿಗಳನ್ನು ವಿದ್ಯಾರ್ಥಿ ಗಳಿಗಾಗಿ ನಿರ್ಮಿಸುವ ವಸತಿ ಗೃಹಕ್ಕೆ ನೀಡಿದರು.

ಕೈ. ವಾ. ಸಿದ್ದನಗೌಡ ಪಾಟೀಲ ಅತಾಲಟ್ಟಿ ಅವರು ೧,೦೦,೦೦೦ ರೂ. ವಾಣಿಜ್ಯ ವಿದ್ಯಾಲಯ ಸ್ಥಾಪನೆ

ಗಾಗಿ ಸಲ್ಲಿಸಿದರು.

ಬಾಬಾನಗರದ ಶ್ರೀ ಪಾಟೀಲ ಸಂಗನಗೌಡರು ತಮ್ಮ ೧೦೦ ಎಕರೆ ಫಲವತ್ತಾದ ಭೂಮಿಯನ್ನು ಬಡವಿದ್ಯಾರ್ಥಿಗಳಿಗೆಂದು ಉಚಿತ ಪ್ರಸಾದ ನಿಲಯಕ್ಕೆ ಅರ್ಪಿಸಿದರು.

ತುಂಗಳದ ಕೈ. ವಾ. ಗುರುಸಿದ್ದಪ್ಪಗೌಡ ಪಾಟೀಲ ಅವರ ಚಿರಸ್ಮರಣೆಗೆಂದು ಅವರ ಧರ್ಮಪತ್ನಿಯವರು ೧೦೦ ಎಕರೆ ಭೂಮಿಯನ್ನು ವಿದ್ಯಾಕೇಂದ್ರಕ್ಕೆ ನೀಡಿದರು.

ಶಿವಣಗಿಯ ಶ್ರೀ ಎಸ್. ಆರ್. ಮಠಮಠ ಸ್ವಾಮಿಗಳವರು ೨೫೦೦೦ ರೂಪಾಯಿ ಕಾಣಿಕೆ ಸಲ್ಲಿಸಿದರು.

ಅಥರ್ಗಾ ಗ್ರಾಮದ ಶ್ರೀ ಮಲಕನಗೌಡ ಬಿರಾದಾರ ಅವರು ತಮ್ಮ ಪುತ್ರನ ನೆನಹಿಗೆಂದು ೯ ಎಕರೆ ಭೂಮಿ ಮತ್ತು ೧೫೦೦೦ರೂ. ನಿಧಿಯನ್ನು ಕೊಡಮಾಡಿದರು.

ವಿಜಾಪುರ ಪ್ರಸಿದ್ಧ ಜವಳಿ ವರ್ತಕರಾದ ಶ್ರೀ ಎಸ್. ಎಸ್. ಹೊರಲಗಿ ಅವರು ೫೦ ಸಹಸ್ರ ದೇಣಿಗೆಯನ್ನಿತ್ತು ಸಂತೋಷಗೊಳಿಸಿದರು.

ಪ್ರಸಿದ್ಧ ವಕೀಲರಾಗಿದ್ದ ಶ್ರೀ ಎ. ಸಿ. ಅಂಗಡಿ ಅವರು ಜೀವನ ಪರ್ಯಂತರ ಸಂಸ್ಥೆಯ ಗೌರವ ಕಾರ್ಯದರ್ಶಿಗಳಾಗಿ ದುಡಿಯುತ್ತ ೧೦ ಸಾವಿರ ದೇಣಿಗೆ ನೀಡಿದರು.

ಎ. ಪಿ. ಎಮ್. ಸಿ. ವಿಜಾಪುರದ ಸದಸ್ಯರು ತಮ್ಮ ಸಂಸ್ಥೆಯಿಂದ ೧೫ ಸಾವಿರ ನಿಧಿ ಸಲ್ಲಿಸಿದರು. ಮುಂದೆಯೂ ವಾರ್ಷಿಕವಾಗಿ ನಿಧಿಸಲ್ಲಿಸುವ ನಿರ್ಧಾರ ಕೈಕೊಂಡರು. ಈ ದೇಣಿಗೆಯು ಸಹಜವಾಗಿ ದೊರೆಯಲು ಶಿವಯೋಗಿಗಳವರ ಅನುಗ್ರಹ. ಸತತ ಪ್ರಯತ್ನಗಳೇ ಪ್ರೇರಣೆ ನೀಡಿದವು.

# ಜಿಲ್ಲೆಯ ತುಂಬಾ ಶಿಕ್ಷಣ ಪ್ರಸಾರ

೧೯೪೩ರಲ್ಲಿ ವಿಜಾಪುರದಲ್ಲಿ ಜನಮನವನ್ನು ತಮ್ಮ ಪ್ರತಿಭೆಯಿಂದ ಶೈಕ್ಷಣಿಕ ಕ್ರಾಂತಿಯತ್ತ ಆಕರ್ಷಿಸಿದ ಶ್ರೀಗಳವರನ್ನು ಜಿಲ್ಲೆಯಾದ್ಯಂತ ಹಾಡಿ-ಹರಿಸುವಂತಾಯಿತು. ಹುನಗುಂದದ ಹಿರಿಯರು ಪ್ರವಚನಕ್ಕಾಗಿ ಬರಲು ಬಿನ್ನವಿಸಿದರು. ಉದ್ದೇಶ ಶಿಕ್ಷಣ ಪ್ರಸಾರ; ಜನ ಜಾಗೃತಿಗಾಗಿ ರಚನಾತ್ಮಕ ಪ್ರಯತ್ನ.

೧೯೪೪ಳ ಶ್ರಾವಣ ಮಾಸದಲ್ಲಿ ಶ್ರೀಗಳವರು ಹುನಗುಂದದಲ್ಲಿ 'ಸಿದ್ಧರಾಮ ಪುರಾಣ' ಪ್ರಾರಂಭಿಸಿದರು. ಒಂದು ತಿಂಗಳವರೆಗೆ ನಡೆದ ಪ್ರವಚನಕ್ಕೆ ಗ್ರಾಮಾಂತರ ಪ್ರದೇಶಗಳಿಂದ ಸಾವಿರಾರು ಭಕ್ತರ ಆಗಮನ. ಶಿಕ್ಷಣದ ಮಹತಿ, ಭಾರತದಲ್ಲಿಯ ಅಜ್ಞಾನ ದೂರಮಾಡುವ ಅಗತ್ಯ, ಸ್ವಾತಂತ್ರ್ಯ ಪ್ರಾಪ್ತಿಗಾಗಿ ಮಾಡಬೇಕಾದ ಅಸಹಕಾರ ಆಂದೋಲನ ನಮ್ಮೆಲ್ಲರ ಆದ್ಯ ಕರ್ತವ್ಯ ಈ ಕಹಳೆಯನ್ನು ನಿರ್ಭೀತಿಯಿಂದ ಧರ್ಮಗುರುಗಳೊಬ್ಬರು ಅಲ್ಲಿ ಮೊಳಗಿಸಿದರು. ಅಂದಿನ ಸ್ವಾತಂತ್ರ್ಯ ಯೋಧರಾದ ಶ್ರೀ ಶಿವಲಿಂಗಪ್ಪ ಕಂಠಿಯವರು ಶಿವಯೋಗಿಗಳವರ ರಾಷ್ಟ್ರಪ್ರೇಮ, ಸಮಾಜದ ಬಗ್ಗೆ ಅವರಲ್ಲಿದ್ದ ಕಳಕಳಿಯನ್ನು ಕಂಡು ಅವರ ಶಿಷ್ಯತ್ವವನ್ನು ಮನಸಾ ಸ್ವೀಕರಿಸಿದರು.

ಹುನಗುಂದದಲ್ಲಿ ಶ್ರೀಗಳು ೨೫ ಸಹಸ್ರ ನಿಧಿ ಕೂಡಿಸಿ ಸಮಾಜದ ಹಿರಿಯರಿಗೆ ಅರ್ಪಿಸಿದರು. 'ಶ್ರೀ ವಿಜಯ



ಬಂಥನಾಳ ಶಿವಯೋಗಿಗಳವರ ಸಂಕಲ್ಪದ ವಿಜಯ ಕಾಲೇಜ ಪರಿಸರದ ವಿಹಂಗಮ ದೃಶ್ಯ

ಮಹಾಂತೇಶ ವಿದ್ಯಾವರ್ಧಕ ಸಂಘ'ವನ್ನು ಸ್ಥಾಪಿಸಿದರು. ಆಗಲೆ ಸಂಸ್ಥೆಯಿಂದ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳನ್ನು ಆರಂಭಿಸಲಾಯಿತು. ಬಡವಿದ್ಯಾರ್ಥಿಗಳಿಗಾಗಿ 'ಉಚಿತ ಪ್ರಸಾದ ನಿಲಯ' ಪ್ರಾರಂಭವಾಯಿತು. 'ನಿಷ್ಠೆಯಿಂದ ನೀವು ಸಂಸ್ಥೆ ಕಟ್ಟಿದ್ದೀರಿ, ನಿಮ್ಮಲ್ಲಿಯ ಒಕ್ಕಟ್ಟು ಔದಾರ್ಯಗಳು ಸಂಸ್ಥೆಯ ನಿರ್ಮಾಣದ ಜೀವಾಳ, ನಿಸ್ವಾರ್ಥ ಸೇವಾನಿರತ ರಾದರೆ ನಿಮ್ಮ ನೆರವಿಗೆ ಕೂಡಲಸಂಗಮನು ಬರುತ್ತಾನೆ. ಶ್ರೀ ವಿಜಯ ಮಹಾಂತೇಶನೂ ಕಾಪಾಡುತ್ತಾನೆ. ಅನುವು ಆಪತ್ತು ಬಂದಾಗ ತಿಳಿಸಿರಿ; ನಾನು ಬಂದೇ ಬರುವೆ.' ಎಂದು ಅಭಯ ವಿತ್ತರು.

ಅದೇ ವರ್ಷ ಬಸವನಬಾಗೇವಾಡಿಯ ಭಕ್ತರಿಂದ ಶ್ರೀ ಗಳವರಲ್ಲಿ ಕಳಕಳಿಯ ಕೋರಿಕೆ. ಶ್ರೀಗಳವರು ಅಲ್ಲಿಗೆ ಹೋದಾಗ ವೃತ್ತಿಯಿಂದ ನಿವೃತ್ತರಾದ ಶ್ರೀ ಸಿಂಹಾಸನ ಮಾಮಲೇದಾರರು ಬಸವೇಶ್ವರ ದೇವಾಲಯದ ಜೀರ್ಣೋ ದ್ಧಾರ ಮಾಡುವ ಸಂಕಲ್ಪದಿಂದ ಒಬ್ಬೊಂಟಿಗರಾಗಿ ಟೊಂಕ ಕಟ್ಟಿ ನಿಂತಿದ್ದರು. 'ನಾವಿಬ್ಬರೂ ಜೋಡಿಯಾಗಿ ಈ ಕಾರ್ಯ ಮಾಡೋಣ'ವೆಂದು ಶಿವಯೋಗಿಗಳು ಅಭಯವಿತ್ತರು. ಪಟ್ಟಣದಲ್ಲಿಯ ವೈರ, ವಿರಸಗಳನ್ನು ಹೋಗಲಾಡಿಸಿ ಎಲ್ಲರಲ್ಲೂ ಸ್ನೇಹ ಸಾಮರಸ್ಯ ತುಂಬಿದರು. 'ಶ್ರೀ ಬಸವೇಶ್ವರ ಸಂಸ್ಥೆ' ಯನ್ನು ಸ್ಥಾಪಿಸಿದರು. ಅಲ್ಲಿಯ ಹಿರಿಯರಲ್ಲಿ ತಮ್ಮ ಪ್ರಭಾವ ಬೀರಿದರು.

'ಬಸವ ಪುರಾಣ' ಹೇಳುತ್ತ ಶರಣರ ಉದಾತ್ತ ನಡೆ ನುಡಿಗಳನ್ನು ಜನಮನದಲ್ಲಿ ಬಿತ್ತಿದರು.

'ಬಸವಣ್ಣನವರು ವಿಶ್ವಮಾನವರು. ಅವರು ರೂಪಿಸಿದ ಕಾಯಕಧರ್ಮ ವಿಶ್ವವಂದ್ಯ. ಪ್ರಾಪಂಚಿಕರಾಗಿಯೂ ಪಾರಮಾರ್ಥ ಸಾಧಿಸಿದ ಶರಣರು ಕನ್ನಡ ನಾಡಿನ ಪುಣ್ಯದ ಪ್ರತೀಕವಾಗಿದ್ದಾರೆ. ಇಲ್ಲಿಯ ನೆಲ, ಜಲ, ಜನ, ಪಶು ಪಕ್ಷಿಗಳೆಲ್ಲ ಪುಣ್ಯದ ಪೀಳಿಗೆ. ಇಂಥ ಪುಣ್ಯ ಭೂಮಿಯ ಜನ ಹೇಗಿರಬೇಕಾಗಿತ್ತು? ಈಗ ನೀವು ಹೇಗಿದ್ದಿರಿ? ಪರಸ್ಪರರಲ್ಲಿ ವಿರಸ–ವೈಷಮ್ಯ, ಕೀಳು-ಮೇಲು, ಹೊಡೆದಾಡ-ಬಡಿದಾಟ ತುಂಬಿ ತುಳುಕುತ್ತಿದೆಯಲ್ಲ! ಬಸವನ ಜನ್ಮ ಭೂಮಿಯ ಬಂಧುಗಳೇ ನೀವು ವಿಶ್ವಬಂಧುತ್ವ ಸಾಧಿಸಬೇಕಾದವರು ಎಚ್ಚರಾಗಿರಿ! ಮುನ್ನಡೆಯಿರಿ! ಅಣ್ಣನವರ ಕಾಯಕಧರ್ಮದ ಕೈವಾರಿ ನೀವಾಗಿ ಬಾಳಿರಿ. ಬೀಳು ಬಿದ್ದ ಬಸವೇಶ್ವರ ದೇವಾಲಯದ ಜೀರ್ಣೋದ್ಧಾರ, ನವೀಕರಣ ಮಾಡುವವರೆಗೆ ನಿಮಗೆ ಸುಖಶಾಂತಿ ಸಾಧ್ಯವಿಲ್ಲ. ನಾವು ನೀವು, ನಾಡಿಗರೆಲ್ಲರೂ ಸೇರಿ ಈ ಕಾರ್ಯ ಮಾಡುವಾ! ಎಂದು ಕಳಕಳಿಯಿಂದ ಭಿನ್ನವಿಸಿದರು. ೩೫೦೦೦ ರೂಪಾಯಿ ನಿಧಿ ಕೂಡಿಸಿಕೊಟ್ಟರು. ಇದರಿಂದ 'ಶ್ರೀ ಬಸವೇಶ್ವರ ಮಾಧ್ಯಮಿಕ ಶಾಲೆ ಯನ್ನು ಸ್ಥಾಪಿಸಲಾಯಿತು.'

ದೇವಾಲಯದ ಜೀರ್ಣೋದ್ಧಾರಕ್ಕೆ ಪ್ರತ್ಯೇಕ ನಿಧಿಯನ್ನು ಸಂಗ್ರಹಿಸಲು ಸಂಕಲ್ಪ ಮಾಡಿದರು. ಅವರ ಹಾಗೂ ಸಿಂಹಾಸನ ಮಾಮಲೇದಾರರ ಮನವಿಗೆ ನಾಡಿನ ಭಕ್ತರಿಂದ ಹನಿಹನಿ ಕೂಡಿ, ತೆರೆತೆರೆಯಾಗಿ ಹಣ ಹರಿದು ಬರುವಂತಾ

ಯಿತು. ಹತ್ತು ವರ್ಷಗಳ ಸತತಪ್ರಯತ್ನದ ಫಲವಾಗಿ ವಿಶಾಲ ವಾದ, ಸುಂದರವಾದ ದೇವಾಲಯು ನವೀಕರಣದೊಂದಿಗೆ ನಿರ್ಮಾಣವಾಗಿ ಶಿವಯೋಗಿಗಳವರ ಸಂಕಲ್ಪ ಈಡೇರುವಂತಾ ಯಿತು. ಮುಂದೆ ಶ್ರೀಗಳವರು ಶ್ರೀ ಬಸವೇಶ್ವರ ಅಮೃತ ಶಿಲಾಮೂರ್ತಿಯನ್ನು ಬಂಥನಾಳ ಮಠದ ಸೇವೆ ಎಂದು ಪ್ರತಿ ಷ್ಠಾಪಿಸಿದರು. ಬಾಗೇವಾಡಿಯಲ್ಲಿ ಕಿರಿಯ ಮಹಾವಿದ್ಯಾಲಯ ಸ್ಥಾಪಿಸಲು ಮುಂದಾಗಿ, ಪ್ರವಚನ ಮೂಲಕ ಧಾರಾಳವಾಗಿ ನಿಧಿ ಸಂಗ್ರಹಿಸಿ ಯಶಸ್ವಿಯಾದುದು ಚಿರಸ್ಮರಣೀಯ.

ವಿಜಾಪುರದ ವಿಜಯ ಕಾಲೇಜು, ಹುನಗುಂದದಲ್ಲಿ ವಿದ್ಯಾ ಕೇಂದ್ರ ಸ್ಥಾಪನೆ, ಬಾಗೇವಾಡಿಯಲ್ಲಾದ ಧಾರ್ಮಿಕ ಮತ್ತು ಶೈಕ್ಷಣಿಕ ಸಾಧನೆಯ ವಾರ್ತೆ ಜಿಲ್ಲೆಯಾದ್ಯಂತ ಬಿರುಸಿ ನಿಂದ ಹರಡಿತು. ಬಂಥನಾಳ ಅಪ್ಪಗಳ ಬೆಳಕನ್ನು ತಮ್ಮ ತಾಲೂಕುಗಳಲ್ಲೂ ಬೀರಿಸಲು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿ ಸಲು ಅಲ್ಲಲ್ಲಿಯ ಅಭಿಮಾನಿ ಕಾರ್ಯಕರ್ತರು ಬಂಥನಾಳದತ್ತ ಧಾವಿಸಿದರು. ಶ್ರೀಗಳವರಲ್ಲಿ ತಮ್ಮಲ್ಲಿಯ ಸ್ಥಿತಿ-ಗತಿಗಳನ್ನು ನಿವೇದಿಸಿ, ದಯಮಾಡಿಸಬೇಕೆಂದು ಪ್ರಾರ್ಥಿಸಿದರು. ಇಂಥ ರಚನಾತ್ಮಕ ಕಾರ್ಯಗಳಲ್ಲಿ ಭಾಗವಹಿಸಲು ಶ್ರೀಗಳವರಿಗೆ ಅತ್ಯಂತ ಉತ್ಸಾಹ ಹಾಗೂ ಅಷ್ಟೇ ಆತ್ಮವಿಶ್ವಾಸ ಅಧಿಕ ವಾಯಿತು.

ಮುದ್ದೇಬಿಹಾಳದಲ್ಲಿ ಶ್ರೀಗಳವರ ಪ್ರವಚನ ಪ್ರಸಾದ ವಾಣಿಯಾಗಿ ಪರಿಣಮಿಸಿತು; ಕಾಮಧೇನುವಾಗಿ ಭಕ್ತರು ಬೇಡಿದುದನ್ನು ಸಲ್ಲಿಸಿದರು. 'ಅನ್ನದಾಸೋಹಕ್ಕಿಂತ ಜ್ಞಾನ

ದಾಸೋಹ ಮೇಲಾದುದು, ದೇವರು ಗುಡಿಗುಂಡಾರಗಳಲ್ಲಿಲ್ಲ. ವಿದ್ಯಾಕೇಂದ್ರಗಳಲ್ಲಿಯ ವಿದ್ಯಾರ್ಥಿಗಳೇ ದೇವನ ವಿವಿಧ ರೂಪ. ಅರಿತರೆ ಶರಣ; ಮರೆತರೆ ಮಾನವ, ಕೋಳಿ, ಕಾಗೆಗಳಂತೆ ಕೂಡಿ ಉಣ್ಣಿರಿ; ಕೂಡಿ ಬಾಳಿರಿ. ಬರುವಾಗ ತಂದುದೇನು? ಇರುವತನಕ ಜಿಪುಣತೆಯಿಂದ ಸಾಕಷ್ಟು ಸಂಪಾದಿಸಿ ಜೊತೆಗೆ ಒಯ್ಯುವದೇನು? ಇಟ್ಟದ್ದು ಬಚ್ಚಿಟ್ಟದು ನಿಮಗಾಗದು! ದಾನ ಮಾಡಿ ಪುಣ್ಯ ಪಡೆಯಿರಿ! ನಿಮ್ಮೆಲ್ಲರ ನಿಮ್ಮ ಪೀಳಿಗೆಯ ಕಲ್ಯಾಣ ಹೊರಗಿನವರು ಬಂದು ಮಾಡಲಾರರು. ನಿಮ್ಮ ಬಂಧು ಬಾಂಧವರಿಗಾಗಿ ನೀವು ತ್ಯಾಗವೀರರಾಗಿರಿ! ಉಳ್ಳವರಲ್ಲಿ ಉದಾರತನ ಪ್ರಕಟವಾದರೆ ಬಡತನ, ದಾರಿದ್ರ್ಯ, ಅಜ್ಞಾನ ತಳಕಿತ್ತಿ ತೊಲಗುವದು!' ಹೀಗೆಂದು ಎಚ್ಚರಿಸಿದರು.

ಶಿವಯೋಗಿಗಳವರ ಪಾದಕ್ಕೆ ಹೊನ್ನಿನ ಮಳೆಗರೆದಂತಾಯಿತು. ಅನೇಕ ದಾನಿಗಳು ಮುಂದೆ ಬಂದರು. 'ವೀರಶೈವ ವಿದ್ಯಾವರ್ಧಕ ಸಂಘ'ದ ಸ್ಥಾಪನೆ ಆದುದು ಆ ಸಮಯದಲ್ಲಿಯೇ.

ಮಾತೋಶ್ರೀ ಗಂಗಮ್ಮ ವೀರಪ್ಪ ಚಿನಿವಾರ ಎಂಬ ತಾಯಿಯು ಮಾಧ್ಯಮಿಕ ಶಾಲಾ ಕಟ್ಟಡ ನಿರ್ಮಿಸಲು ೪೦,೦೦೦ ರೂಪಾಯಿ ಸಂತೋಷದಿಂದ ಅರ್ಪಿಸಿದರು.

ಮುಂದೆ ಈ ಮಹಾದಾನಿ ಮಾತೆಯವರು ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾಗಿ, ತಮ್ಮ ಒಡೆತನದಲ್ಲಿಯ ೧೦ ಲಕ್ಷ ರೂಪಾಯಿ ಬೆಲೆಬಾಳ್ವ ಸ್ಥಿರಾಸ್ತಿಯನ್ನು ವಿದ್ಯಾಪ್ರಸಾರಕ್ಕೆ ಸಮರ್ಪಿಸಿದರು. 'ಶ್ರೀಮತಿ ಗಂಗಮ್ಮ ವೀರಪ್ಪ ಚಿನಿವಾರ

ವಿಶ್ವಸ್ಥ ನಿಧಿ'ಯನ್ನು ಸ್ಥಾಪಿಸಲಾಯಿತು. ೧೯೬೮ರಲ್ಲಿ ಈ ತಾಯಿಯವರ ಹೆಸರಿನಲ್ಲಿ ಕಲಾಮಹಾವಿದ್ಯಾಲಯ ಆರಂಭವಾಯಿತು. ಸುಮಾರು ೫ ಲಕ್ಷ ರೂಪಾಯಿ ವೆಚ್ಚದಿಂದ ಕಾಲೇಜ ಕಟ್ಟಡ ನಿರ್ಮಾಣವಾಯಿತು. ೫೦ ಸಾವಿರ ರೂಪಾಯಿ ಕಾಣಿಕೆಯಿಂದ ತಾಯಿಯವರ ಹೆಸರಿನಲ್ಲಿ ಮಂಗಲ ಕಾರ್ಯಾಲಯ ೭ಲ್ಲಿ ಸಮಾಜಕ್ಕೆ ಅರ್ಪಿತವಾಯಿತು.

ಮುದ್ದೇಬಿಹಾಳದಲ್ಲಿಯಾದ ಧಾರ್ಮಿಕ ಸಾಮಾಜಿಕ ಮಹತ್ಕ್ರಾಂತಿಯ ವಾರ್ತೆ ಮನೆಮನೆಯ ಮಾತಾಯಿತು. 'ಬಂಥನಾಳ ಶಿವಯೋಗಿಗಳು ದಯಮಾಡಿಸಿದರೆ ಹೊನ್ನಿನ ಮಳೆ ತರುತ್ತಾರೆ! ಏನಾದರೊಂದು ಮಹಾಕಾರ್ಯ ಮಾಡಿಯೇ ಹೋಗುತ್ತಾರೆ!' ಎಂದ ಜಿಲ್ಲೆಯ ಊರೂರಿನ ಜನಸಾಮಾನ್ಯರು ನಿತ್ಯ ಸ್ಮರಿಸುವಂತಾಯಿತು.

ಶಿವಯೋಗಿಗಳವರು ಬರಿ ಪಟ್ಟಣಗಳಲ್ಲಿ ಮಾತ್ರ ವಿದ್ಯಾ ಪ್ರಸಾರ ಕೇಂದ್ರಗಳನ್ನು ಸ್ಥಾಪಿಸಲಿಲ್ಲ. ಸ್ವಭಾವತಃ ಅವರು ಗ್ರಾಮಾಂತರ ಜನತೆಯ ಜೀವಾಳ, ಹಳ್ಳಿಗರೆಂದರೆ ಅಚ್ಚು ಮೆಚ್ಚು. ನಿಷ್ಠೆ, ಭಕ್ತಿ, ಔದಾರ್ಯಗಳನ್ನು ಧಾರಾಳವಾಗಿ ಕಾಣಬೇಕು ಹಳ್ಳಿಯ ಭಕ್ತರಲ್ಲಿ ಎಂಬುದು ಅವರ ಅಭಿಪ್ರಾಯ.

ಸಿಂದಗಿ, ಇಂಡಿ, ಜಮಖಂಡಿ, ರಬಕವಿ, ಬನಹಟ್ಟಿ, ಮೊರಟಗಿ ಆಲಮೇಲಿ, ತೇರದಾಳ, ಸಾವಳಗಿ, ಶಿವಣಗಿ, ಮಸೂತಿ, ಹಿರೇರೂಗಿ, ಅಗರಬೇಡ, ನಿಂಬಾಳ, ತಾಂಬಾ, ೭ಥರ್ಗಾ, ಮಹಾಲಿಂಗಪೂರ, ತಿಕೋಟಾ, ಇಂಗಳೇಶ್ವರ, ವಂದಾಲಿ, ದೇವಣಗಾವ, ಚಡಚಣ, ಹೊರ್ತಿ, ನಿವರಗಿ

ಸಾಲೊಟಗಿ, ಬಳ್ಳೊಳ್ಳಿ, ಲಚ್ಯಾಣ, ಅಮೀನಗಡ ಮೊದಲಾದ ದೊಡ್ಡ ಊರುಗಳಲ್ಲಿ, ತಾಲೂಕುಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲು ಶಿವಯೋಗಿಗಳವರ ಪ್ರೇರಣೆ-ಪ್ರಸಾದವಾಣಿಯೇ ಕಾರಣವಾಯಿತು. ಅನಂತರ ಪುಣೆ, ಸೊಲ್ಲಾಪುರ,ಮುಂಬಯಿ, ರಾಯಚೂರ, ಕಲಬುರ್ಗಿ, ಬಸವಕಲ್ಯಾಣ, ಬೀದರ ಪ್ರಮುಖ ನಗರಗಳಲ್ಲಿಯು ವಿದ್ಯಾಕೇಂದ್ರಗಳಿಗಾಗಿ, ಸಮಾಜಕಲ್ಯಾಣ ಮಂದಿರಗಳಿಗಾಗಿ, ಉಚಿತ ಪ್ರಸಾದ ನಿಲಯುಗಳಿಗಾಗಿ ವಿಶ್ರಮಿಸದೆ ಸಂಚರಿಸಿ ಲಕ್ಷಾಂತರ ನಿಧಿ ಸಂಗ್ರಹಿಸಿ ಅಲ್ಲಲ್ಲಿ ಅರ್ಪಿಸಿದರು. ಅವರು ಹಚ್ಚಿದ ನಂದಾದೀಪಗಳು ನೂರಾರು; ಅವುಗಳಿಂದುಂಟಾದ ಪ್ರಕಾಶದ ಪರಿಣಾಮ ಲಕ್ಷಾಂತರ ವಿದ್ಯಾರ್ಥಿಗಳಿಗೆ ಸಂದಿದೆ. ಬಂಥನಾಳದ ಬೆಳಕು ಉತ್ತರ ಕರ್ನಾಟಕದುದ್ದಕ್ಕೂ, ಮಹಾರಾಷ್ಟ್ರದಲ್ಲೂ ಪಸರಿಸಿರುವದು ಶ್ರೀಗಳವರ ಸಾರ್ಥಕ ಜೀವಿತದ ಫಲವಾಗಿ; ಅದು ಎಂದೆಂದಿಗೂ ಅವಿನಾಶಿಯಾಗಿ ಶಾಶ್ವತವಾಗಿ ನಿಂತಿದೆ; ನಿಲ್ಲುತ್ತದೆ.

## ಮಹೋತ್ಸವಗಳ ಮೂಲಕ ಮಹತ್ಸಾಧನೆ

ಬಂಥನಾಳ ಪೀಠದ ಶಾಖಾಮಠಗಳಲ್ಲಿ ಸುಕ್ಷೇತ್ರ ಲಚ್ಯಾಣ ಮಠವು ಕೇಂದ್ರ ಬಿಂದು ವಿಶಾಲವಾದ ಭಕ್ತರ ಬಳಗ ಲಚ್ಯಾಣ ಮಠದ ಅಳಿಯದ ಆಸ್ತಿ, ಈ ಆಸ್ತಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶಗಳುದ್ದಕ್ಕೂ ಹರಡಿದೆ. ಇದಕ್ಕೆ ಕಾರಣಿಕ ಪುರುಷ ಶ್ರೀ ಸಿದ್ಧಲಿಂಗ ಮಹಾರಾಜರ ಅನುಗ್ರಹ ಆಶೀರ್ವಾದಗಳು ಇಂದಿಗೂ ಚೇತೋಹಾರಿ ಅಂತೆಯೇ ಗುರುಪೀಠದ ಸಂಗನಬಸವ ಶಿವಯೋಗಿಗಳಿಗೆ ಲಚ್ಯಾಣವೆಂದರೆ ಪಂಚಪ್ರಾಣವಾಗಿತ್ತು; ಅಚ್ಚುಮೆಚ್ಚಾಗಿತ್ತು.

೧೯೫೭ರಲ್ಲಿ ಲಚ್ಯಾಣ ಮಠದಲ್ಲಿ 'ಜಾಗತಿಕ ಸರ್ವಧರ್ಮ ಸಮ್ಮೇಲನ'ವನ್ನು ಸಂಘಟಿಸಿ, ನಾಲ್ಕುದಿನಗಳವರೆಗೆ ಧರ್ಮಗಳ ಮರ್ಮವನ್ನು ಗ್ರಾಮೀಣ ಭಕ್ತರಿಗೆ ಬೋಧಿಸಿದ ಶ್ರೇಯ ಶಿವಯೋಗಿಗಳದಾಯಿತು. ಹಿಂದೂ, ಮುಸ್ಲೀಮ್, ಕ್ರೈಸ್ತ, ಜೈನ, ಬೌದ್ಧ ಧರ್ಮಗಳ ಪಂಡಿತರನ್ನು, ಯತಿಗಳನ್ನು ದೇಶದಾದ್ಯಂತದಿಂದ ಆಹ್ವಾನಿಸಿ, ಸಕಲಧರ್ಮಗಳ ತಿರುಳನ್ನು ವೀರಶೈವ ಧರ್ಮ ಗರ್ಭೀಕರಿಸಿಕೊಂಡು ವಿಶ್ವಧರ್ಮವಾಗಿದೆ. ಎಂಬುದನ್ನು ಜನಮನದಲ್ಲಿ ಬಿಂಬಿಸಿದರು. ಅಗ ಮುಕ್ತಾಯ ಸಮಾರಂಭದಲ್ಲಿ ಶಿವಯೋಗಿಗಳವರು ನೀಡಿದ ಆಶೀರ್ವಚನದ ತಿರುಳು:

"ಅಂಗದ ಮೇಲೆ ಲಿಂಗವುಳ್ಳವರೆಲ್ಲ ಸಂಗಯ್ಯನೆಂಬೆ ಎಂಬುದು ಬಸವನ ಆದೇಶ, ಇದರಲ್ಲಿ ವಿಶಾಲವಾದ ತತ್ವವಡಗಿದೆ. ಸಂಗಯ್ಯನೆಂದರೆ ಶಿವ; ಸತ್ ಚಿತ್ ಆನಂದಮೂರ್ತಿ. ಈ ಕುರುವಿಡಿದು ದೈವೀಶಕ್ತಿ ಸಂಪಾದಿಸುವುದೇ ಶೂನ್ಯ ಸಂಪಾದನೆ. ಶೂನ್ಯವೆಂದರೆ ಆತ್ಮಶಾಂತಿ; ಮುಕ್ತಿಯ ಮನೆ; ಶಾಂತಿಯ ಶಿಖರ. ಸಕಲರಿಗೂ ಸುಖಬಯಸುವ ಉದಾತ್ತ ಭಾವ ಶರಣರದು. ಅಯ್ಯಾ ಎಂದೆಡೆ ಸ್ವರ್ಗ; ಎಲವೊ ಎಂದೆಡೆ ನರಕ. ನಾಕ ನರಕಗಳು ಅಲ್ಲೂ ಇಲ್ಲ, ಇಲ್ಲೂ ಇಲ್ಲ, ನಮ್ಮಲ್ಲೇ ಇವೆ; ನಮ್ಮ ಆಚರಣೆಯಲ್ಲಿವೆ. ಸದಾಚಾರವೇ ಶಿವನ ಒಲುಮೆಗೆ ಸೋಪಾನ. ದಯವೇ ಧರ್ಮದ ಮೂಲ, ಸತ್ಯ ಅಹಿಂಸೆಗಳಿಗೆ ಎಲ್ಲ ಧರ್ಮಗಳೂ ಮೀಸಲು. ಇದನ್ನೇ ವೀರಶೈವ ಧರ್ಮ ಪ್ರತಿಪಾದಿಸಿದೆ; ಪೋಷಿಸಿದೆ; ಘೋಷಿಸಿದೆ."

ಜಾಗತಿಕ ಶಾಂತಿಗಾಗಿ ರಾಯಚೂರ ಜಿಲ್ಲೆಯ 'ಕೃಷ್ಣಾ' ಸುಕ್ಷೇತ್ರದಲ್ಲಿ ಕೋಟಿ ಜಪಯಜ್ಞವನ್ನು ಸಂಘಟಿಸಿದಾಗಲೂ ಶಿವಯೋಗಿಗಳು ಸಕಲ ಧರ್ಮಗಳ ಅವಲಂಬಿತರಲ್ಲಿ ಇಂಥದೇ ಮನವಿಯನ್ನು ಮುಂದಿಟ್ಟರು. ಕೋಟಿ ಜಪ ಯಜ್ಞದಲ್ಲಿ ಹೈದ್ರಾಬಾದ ಕರ್ನಾಟಕದ ಸಾವಿರಾರು ಜನ ಮುಸ್ಲೀಮ್ ಬಾಂಧವರು ಸ್ವಯಂಪ್ರೇರಿತರಾಗಿ ಭಾಗವಹಿಸಲು ಶಿವಯೋಗಿಗಳವರ ಜಾತ್ಯಾತೀತ ಭಾವನೆಯೇ ಪ್ರೇರಣೆ ನೀಡಿತೆನ್ನಬಹುದು.

೧೯೫೪ರಲ್ಲಿ ಜರುಗಿದ '೭೭೦ ಅಮರ ಗಣಾಧೀಶ್ವರರ ಮಂಟಪ ಪೂಜಾ ಮಹೋತ್ಸವ'ವು ಇತಿಹಾಸ ಪ್ರಸಿದ್ಧ ವಿಜಾ

ಪುರದಲ್ಲಿ ಐತಿಹಾಸಿಕ ದಾಖಲೆಯನ್ನೇ ಸ್ಥಾಪಿಸುವಂತಾಯಿತು.

ವಿಜಾಪುರದ ಉತ್ತರ ದಿಶೆಯಲ್ಲಿ ವಿಜಯ ಕಾಲೇಜದ ಕಲೆ, ವಿಜ್ಞಾನ ಕಟ್ಟಡಗಳು, ವಿದ್ಯಾರ್ಥಿಗಳಿಗಾಗಿ ವಸತಿಗೃಹಗಳು, ಉಚಿತ ಪ್ರಸಾದ ನಿಲಯದ ಭವ್ಯ ಕಟ್ಟಡ, ಬೋಧಕ ವರ್ಗದವರಿಗೆ ವಸತಿ ಗೃಹಗಳು ನಿರ್ಮಾಣಗೊಳ್ಳುತ್ತಿದ್ದ ಸಮಯವದು. ವಾಣಿಜ್ಯ ಮಹಾವಿದ್ಯಾಲಯವು ತಲೆ ಎತ್ತಿದ ಕಾಲ. ಅಲ್ಲಿಯ ಪ್ರಶಾಂತ ವಾತಾವರಣಕ್ಕೆ ಶಾಶ್ವತವಾದ ಪರಿಶುದ್ಧತೆಯನ್ನುಂಟುಮಾಡುವ ಮಹದಾಸೆ ಬಂಥನಾಳ ಶಿವಯೋಗಿಗಳಿಗೆ. ಅಲ್ಲದೆ ವಿಜಾಪುರದ ಸಹೃದಯಿಗರು ಸ್ವಯಂ ಸ್ಫೂರ್ತಿಯಿಂದ ಕಟ್ಟಿದ ವಿದ್ಯಾಕೇಂದ್ರಗಳ ದರ್ಶನ ನಾಡಿಗರಿಗೂ, ರಾಷ್ಟ್ರಮಟ್ಟದ ನಾಯಕರಿಗೂ ಆಗುವಂತಾಗಬೇಕು. ಬಸವ ನುಡಿಸಿದ, ಶರಣರು ಬಾಳಿ ಬೆಳಗಿದ, ಅಮರಗಣಾಧೀಶ್ವರರು ಮಿಂಚಿಹೋದ ಪುಣ್ಯಭೂಮಿಯ ಪರಿಚಯ ಭಾರತೀಯರಿಗೆಲ್ಲ ಆಗಬೇಕಾದುದು ಅಗತ್ಯ. ಇಂಥ ಉದಾತ್ತ ಗುರಿ ಸಾಧನೆಗಾಗಿ ಧಾರ್ಮಿಕ ಜಾಗೃತಿಯೊಂದಿಗೆ ಶೈಕ್ಷಣಿಕವಾಗಿ ಅನುಕೂಲತೆ ತಾವಾಗಿಯೇ ಪ್ರಾಪ್ತವಾಗಬಹುದಾದ ಬೃಹದ್ ಮಹೋತ್ಸವವನ್ನು ವಿಜಯ ಕಾಲೇಜದ ವಿಶಾಲವಾದ ಪ್ರಾಂಗಣದಲ್ಲಿ ಜರುಗಿಸಲು ಸಂಕಲ್ಪಿಸಿದರು. '೭೭೦ ಅಮರ ಗಣಾಧೀಶ್ವರರ ಮಂಟಪ ಪೂಜಾ ಮಹೋತ್ಸವವನ್ನು ಜರುಗಿಸುವ ಧೀರೋದಾತ್ತ ಸಂಕಲ್ಪವನ್ನು ಅಪ್ಪಗಳು ಒಂದು ದಿನ ಮಂಗಲಸಮಯದಲ್ಲಿ ಪ್ರಕಟಿಸಿದರು. ಪ್ರವಚನಕ್ಕಾಗಿ ನೆರೆದ ಹಿರಿಯರು, ಸಾವಿರಾರು ಜನ ಭಕ್ತರು ಬೆರಗಾಗಿ ಬೆರಳು ಕಚ್ಚಿ

ದರು' '೭೭೦ ಮಂಟಪಗಳನ್ನು ನಿರ್ಮಿಸಬೇಕು. ಅಷ್ಟು ಜನ ಸ್ವಾಮಿಗಳನ್ನು ಆಹ್ವಾನಿಸಬೇಕು. ಪೂಜಿಸುವ ಭಕ್ತ ದಂಪತಿಗಳನ್ನು ಗೊತ್ತುಮಾಡಬೇಕು. ಬರುವ ಯಾತ್ರಿಕರಿಗೆ ಪ್ರಸಾದ, ವಸತಿ, ಆತಿಥ್ಯ ಶಿವಶಿವಾ! ಹೇಗೆ ಸಾಧ್ಯ?' ಎಂದು ಗುಜುಗುಜು-ಪಿಸುಮಾತು ನಡೆದವು. ನಾಲ್ಕಾರು ದಿವಸ ಶ್ರೀಗಳವರು ಮಹೋತ್ಸವದ ಮಾತನ್ನೇ ಪ್ರವಚನದಲ್ಲಿ ಎತ್ತ ಲಿಲ್ಲ. ವಚನ ಪಿತಾಮಹ ಫ. ಗು. ಹಳಕಟ್ಟಿ ಆವರ ಅನುಮತಿ ಪಡೆದಿದ್ದರು. ನಂತರ ಒಂದು ದಿನ ಪ್ರವಚನದಲ್ಲಿ ಅತ್ಯಂತ ಸಂತೋಷದಿಂದ:

"ವಿಜಾಪುರದಲ್ಲಿ ವಿಜಯಶ್ರೀ ಮೆರೆಯಿಸಿದ ಮಹಾಭಕ್ತರೇ, ೭೭೦ ಅಮರಗಣಾಧೀಶ್ವರರ ಮಂಟಪ ಪೂಜಾ ಮಹೋತ್ಸವವನ್ನು ಜರುಗಿಸುವ ಸಂಕಲ್ಪ ಶಿವನ ಸಂಕಲ್ಪ' ವಚನ ಪಿತಾಮಹ ಫಕೀರಪ್ಪ ಹಳಕಟ್ಟಿಯವರ ಘನವಾದ ಪ್ರೇರಣೆಯಿಂದ ನಡೆಯಲಿರುವ ಐತಿಹಾಸಿಕ ಉತ್ಸವ. ಈ ಪವಿತ್ರ ಕಾರ್ಯದಲ್ಲಿ ನಾ ಮುಂದೆ ನೀ ಮುಂದೆ ಎಂದು ಭಾಗವಹಿಸುವ ಕುಟುಂಬಗಳು ಸಾವಿರಾರು. ಸ್ವಯಂ ಸೇವೆಗಾಗಿ ಮುಂದೆ ಬರುವವರೂ ಸಾವಿರಾರು ಜನರು, ಸಾವಿರಾರು ಹಳ್ಳಿಗಳ ಬೆಂಬಲ ನಮ್ಮ ಹಿಂದೆ ಇದೆ. ವಿಜಾಪುರದ ಬಲ್ಲಿದರಾದ ನೀವು ಕಾರ್ಯಕರ್ತರಾಗಿ ರಚನಾತ್ಮಕ ಕೆಲಸ ಅಚ್ಚುಕಟ್ಟಾಗಿ ನೆರವೇರಿಸಲು ಹಿಂದೆ ಮುಂದೆ ನೋಡಲಾರಿರಿ! ನಿಮ್ಮ ಒಕ್ಕಟ್ಟು, ನಿಮ್ಮ ನಿಸ್ವಾರ್ಥ ಸೇವಾಭಾವ ನಾಡಿನ ತುಂಬ ತನ್ಮೂಲಕ ರಾಷ್ಟ್ರದ ತುಂಬ ಪ್ರಸಾರವಾಗುವ ಸುವರ್ಣ ಸಮಯ ಬಂದಿದೆ.

ಹಿಂಜರಿಯುವುದೇಕೆ? ಒಳ್ಳೆಯ ಕೆಲಸಗಳಿಗಾಗಿ ಒಳ್ಳೆಯ ಭಾವನೆ ತಾಳಿರೆಂದು ನಿಮಗೆ ಬೋಧಿಸುವ ಅಗತ್ಯವಿಲ್ಲ. ಯಾಕಂದರೆ ನೀವು ಸ್ವಭಾವದಿಂದ ಸದಾಚಾರಿಗಳು. ಬಸವನ ಬಂಧುಗಳೆಂದೂ ಸಮಾಜಕಲ್ಯಾಣ ಕಾರ್ಯಕ್ಕೆ ಹಿಂಜರಿಯರು!? ಹೀಗೆಂದು ಪ್ರೇರೇಪಿಸಿದರು.

'ಶಿವಯೋಗಿಗಳವರಿಗೆ ಜಯವಾಗಲಿ!' ಘೋಷಣೆಯೊಂದಿಗೆ ಒಪ್ಪಿಕೊಂಡರು.

ಬಂಥನಾಳ ಶಿವಯೋಗಿಗಳವರ ಸಂದೇಶದೊಂದಿಗೆ ಮಹೋತ್ಸವದ ಪ್ರಕಟನೆ ನಾಡಿನ ತುಂಬ ಮನೆಮನೆ ತಲುಪಿತು. ಪತ್ರಿಕೆಗಳಲ್ಲಿ ಈ ಅಭೂತ ಪೂರ್ವ ಉತ್ಸವದ ವಾರ್ತೆಗೆ ಪ್ರಧಾನ ಸ್ಥಾನ ದೊರೆಯಿತು. ಅಂದಿನ ಮುಂಬಯಿ ರಾಜ್ಯದ ಮುಖ್ಯ ಮಂತ್ರಿ ಮುರಾರಜಿ ದೇಸಾಯಿ ಅವರು ಇಂಥ ಮಹತ್ಕಾರ್ಯದ ಯಶಸ್ಸಿಗಾಗಿ ಸರಕಾರದಿಂದ ಅಗತ್ಯವಾದ ನೆರವನ್ನೀಯಲು ಮುಂದಾದುದು ಇಂದಿಗೂ ಶ್ಲಾಘನೀಯ. ೧೫೧ ರೂಪಾಯಿ ದೇಣಿಗೆ ಸಲ್ಲಿಸುವ ದಂಪತಿಗಳು ಮಂಟಪ ಪೂಜೆಗೆ ಅರ್ಹರು, ಈ ನಿಯಮ ತಿಳಿದು ಅಗತ್ಯಕ್ಕಿಂತ ಅಧಿಕವಾಗಿ ದಂಪತಿಗಳ ಹೆಸರುಗಳು ಮಹೋತ್ಸವದ ಕಾರ್ಯಾಲಯಕ್ಕೆ ದೇಣಿಗೆಯೊಂದಿಗೆ ದಾಖಲಾತಿಗಾಗಿ ಬಂದುದು ಎಲ್ಲರಿಗೂ ಅಚ್ಚರಿ. ಮಂಟಪ ನಿರ್ಮಾಣಕ್ಕಾಗಿ ಬಿದಿರು, ಚಾಪೆ, ಅವಶ್ಯಕ ಸಾಮಗ್ರಿ ಕಲಬುರ್ಗಿ, ಬೀದರ, ರಾಯಚೂರ, ಧಾರವಾಡ, ಬೆಳಗಾವಿ ಜಿಲ್ಲೆಗಳ ಭಕ್ತರು ಟ್ರಕ್ಕು ತುಂಬಿ ತಂದು ಸಲ್ಲಿಸಿದರು. ಲೋಕೋಪಯೋಗಿ ಇಲಾಖೆಯಿಂದ ವಿಶಾಲವಾದ ಮಹೋ

ತ್ಸವದ ಬಯಲಿನಲ್ಲಿ ಅಚ್ಚುಕಟ್ಟಾದ ದಾರಿಗಳ ನಿರ್ಮಾಣ ಭರದಿಂದ ನಡೆದುದರ ನೋಟ ವಿಜಾಪುರದ ಜನರ ಮನದಲ್ಲಿ ಇ ದಿಗೂ ಹಸಿರಾಗಿಯೇ ಉಳಿದಿದೆ.

ತಿಂಗಳುಗಟ್ಟಲೆ ಪೂರ್ವಸಿದ್ಧತೆ, ಬರುವ ಲಕ್ಷಾಂತರ ಯಾತ್ರಿಕರಿಗಾಗಿ ಪ್ರಸಾದ, ವಸತಿಗಾಗಿ ನಗರದ ಮನೆಮನೆಗಳಲ್ಲಿ ಆನಂದದ ಸ್ವಾಗತ! ಜಾತಿ ಮತ ಪಂಥಗಳೆನ್ನದೆ ಎಲ್ಲರೂ ಒಂದಾಗಿ ನಿಂತು ಅಂದಿನ ಭಾವೈಕ್ಯ ಎಂಥ ಪೂಜ್ಯತೆಯನ್ನುಂಟು ಮಾಡಿತ್ತಲ್ಲ!

ಜಿಲ್ಲೆಯ ಹಳ್ಳಿಗಳಿಂದ ಟ್ರಕ್ಕು ತುಂಬಾ ಸಜ್ಜೆಯರೊಟ್ಟಿ ವಿಜಾಪುರದತ್ತ ಬಾಜಿ–ಬಜಂತ್ರಿಯೊಂದಿಗೆ ಸಾಗಿ ಬಂದವು. ನೂರಾರು ಚೀಲ ಅಕ್ಕಿ. ಗೋದಿ, ಬೆಲ್ಲ ಬಂಥನಾಳ ಅಪ್ಪಗಳ ಪಾದಗಳಲ್ಲಿ ಸಲ್ಲಿಸಿ ಕೃತಾರ್ಥರಾದವರು ನೂರಾರು ಜನಭಕ್ತರು.

ಮುಂಬಯಿ ರಾಜ್ಯದ ಮುಖ್ಯ ಮಂತ್ರಿ ಮುರಾರಜಿ ಭಾಯಿ ದೇಸಾಯಿಯವರು, ಮೈಸೂರಿನ ಶ್ರೀಮನ್‌ಮಹಾರಾಜರು, ಅನೇಕ ಜಗದ್ಗುರುಗಳು ಅತಿಥಿಗಳಾಗಿ ಆಗಮಿಸಿದರು. ವಿಜಾಪುರದಲ್ಲಿ ಅಂದು ನೆರೆದ ಯಾತ್ರಿಕರ ಸಂಖ್ಯೆ ಸುಮಾರು ನಾಲ್ಕು ಲಕ್ಷ, ವೈಭವದ ಆ ಉತ್ಸವದಲ್ಲಿ ಯಾವ ಸಾವು ನೋವುಗಳಾಗಲಿ, ಕಳ್ಳತನಗಳಾಗಲಿ, ನಿರಾಶೆ-ನಿರುಪಯೋಗವಾಗಲಿ ನಡೆಯಲಿಲ್ಲ. ಈ ಮಹೋತ್ಸವದ ಪ್ರಸಾದ ಯಾತ್ರಿಕರಿಗೆಲ್ಲ ವಿತರಣೆ; ಅದೊಂದು ವಿಶೇಷ. ಎಲ್ಲ ಆಯವ್ಯಯದ ಅಂತಿಮ ಲೆಕ್ಕವನ್ನು ಅಚ್ಚುಕಟ್ಟಾಗಿ ಪ್ರಕಟಿಸಲಾಯಿತು. ದಕ್ಷಿಣೆಯಾಗಿ ಬಂದ ಹಾಗೂ ಅಂತಿಮವಾಗಿ ಉಳಿದ

ಣ: ೧,೦೨,೨೭೫ ರೂಪಾಯಿ. ಇದನ್ನು ಶ್ರೀಗಳವರು ಾಲೇಜುಗಳ ವಿಸ್ತರಣಾ ಕಾರ್ಯಕ್ಕಾಗಿ ಸಮರ್ಪಿಸಿದರು.

೧೯೫೫ರಲ್ಲಿ ವೀರಶೈವ ಮಹಾ ಸಭೆಯ ಅಧ್ಯಕ್ಷರೆಂದು ರ್ವಾನುಮತದಿಂದ ಬಂಥನಾಳ ಶ್ರೀಗಳವರನ್ನು ಆಯ್ಕೆ ಾಡಲಾಯಿತು. ಈ ಆಯ್ಕೆಯಿಂದ ಶ್ರೀಗಳವರ ಜವಾಬ್ದಾರಿ ಚ್ಚಿತು. ವೀರಶೈವ ಸಮಾಜದ (ಅಖಿಲ ಭಾರತ ಮಟ್ಟದಲ್ಲಿ) ಉನ್ನತಿಗಾಗಿ ಅನೇಕ ಯೋಜನೆಗಳನ್ನು ಸ್ವಯಂ ಸಿದ್ಧರಾಗಿ ಾರ್ಯರೂಪಕ್ಕಿಳಿಸಿದ ಸಾಹಸ ಅವರದು. ಕರ್ನಾಟಕ, ಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲಿ ಸಂಚರಿಸಿ ವೀರಶೈವ ಮಾಜ ಬಾಂಧವರನ್ನು ಸಮಾಜ ಕಾರ್ಯಕ್ಕೆ ಅಣಿಯಾಗಲು ನ್ನವಿಸಿದರು. ಹಣಕಾಸಿನ ಮುಗ್ಗಟ್ಟಿನಿಂದ ಅಶಕ್ತವಾದ ಹಾಸಭೆಗೆ ಪ್ರಾರಂಭದಲ್ಲಿ ಬಂಥನಾಳ ಮಠದಿಂದ ೧೦೦೧ ೂಪಾಯಿ ದೇಣಿಗೆಯನ್ನಿತ್ತು ಶುಭ ಕೋರಿದರು. ಎಲ್ಲ ಠಾಧೀಶರಿಂದ ಕಾಣಿಕೆ ಬರಲು ಸುರುವಾಯಿತು. ೧೯೫೫ ಂದ ೫೯ರ ವರೆಗೆ ಅವರು ಮಹಾಸಭೆಗೋಸ್ಕರ ಸಾಧಿಸಿದ ್ರೀಯ ಉಲ್ಲೇಖನೀಯ; ಚಿರಸ್ಮರಣೀಯ.

೧೯೫೭ರಲ್ಲಿ ಬಸವಕಲ್ಯಾಣದಲ್ಲಿ 'ಅನುಭವ ಮಂಟಪ' ರ್ಮಾಣಕ್ಕೆಂದು ಪ್ರವಚನ ಪ್ರಾರಂಭಿಸಿದರು. ಒಂದು ತಿಂಗ ಲ್ಲಿ ೫೦,೦೦೦ ರೂಪಾಯಿ ಸಂಗ್ರಹಿಸಿ ಕಟ್ಟಡ ನಿಧಿಗೆ ಅರ್ಪಿಸಿ ದರು. ಮುಂದಿನ ಕಾರ್ಯ ಸುಸೂತ್ರವಾಗಿ ನಡೆಯಲು ಅಭಿ ಮಾನಿಗಳ ಸಮಿತಿಯನ್ನು ರಚಿಸಿದರು. ಅವರ ಬರವಿಗಾಗಿ ನೂರಾರು ಊರುಗಳ ವಿದ್ಯಾಕೇಂದ್ರಗಳ ಕಾರ್ಯಕರ್ತರು

ಹೋದಹೋದಲ್ಲಿ ಬೆನ್ನುಹತ್ತುತ್ತಿದ್ದರು. 'ಬಿಟ್ಟೆನೆಂದರೂ ಬಿಡಲಾರದ ಈ ಭಕ್ತರ ಬಾಂಧವ್ಯ ನನ್ನನ್ನು ಸೆರೆಹಿಡಿದಿದೆ. ಸತ್ಕಾರ್ಯಗಳಲ್ಲಿ ದಿನಗಳೆಯುವದರಿಂದ ಅತೀಂದ್ರಿಯ ಶಕ್ತಿ, ಉತ್ಸಾಹ ನನ್ನಲ್ಲಿ ಇಮ್ಮಡಿಯಾಗುತ್ತಿದೆ. ನಾನು ಎಲ್ಲರಿಗಾಗಿ; ಎಲ್ಲರೂ ನನಗಾಗಿ.' ಹೀಗೆಂದು ಶ್ರೀಗಳವರು ನಗನಗುತ್ತ ಹೇಳುವದು ವಾಡಿಕೆ.

ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿ ಅವರು ಮಾಡಿದ ಅಪೂರ್ವ ಸಾಧನೆಯಿಂದ ಸಂಸ್ಥೆಯು ಸುಸ್ಥಿತಿಯಲ್ಲಿ ನಿಲ್ಲುವಂತಾಯಿತು. ಶ್ರೀಗಳವರು ಅತ್ಯಂತ ಸಂತಸದಿಂದ ಅಧ್ಯಕ್ಷ ಸ್ಥಾನವನ್ನು ರ್‍ಯಾಂಗ್ಲರ್ ಡಿ. ಸಿ. ಪಾವಟೆಯವರೆಗೆ ವಹಿಸಿ, ತಾವು ಸಮಾಜಕಾರ್ಯಗಳಲ್ಲಿ ಮುನ್ನಡೆದರು.

೧೯೬೦ ಜನೇವರಿ ೧೫ರಂದು ೭೭೦ ಅಮರಗಣಾಧೀಶ್ವರರ ಸ್ಮಾರಕ ಮಹಾಲಿಂಗವನ್ನು ವಿಜಯ ಕಾಲೇಜದ ಪ್ರಾಂಗಣದಲ್ಲಿ ಪ್ರತಿಷ್ಠಾಪಿಸಿದರು. ೭೭೦ ಅಮರಗಣಾಧೀಶರನ್ನು ಗರ್ಭೀಕರಿಸಿಕೊಂಡಿರುವ ಈ ಮಹಾಲಿಂಗ ಗೋಲಗುಮ್ಮಟದ ನಂತರ ವಿಜಾಪುರದಲ್ಲಿ ಭವ್ಯತೆಗೆ–ದಿವ್ಯತೆಗೆ ನಿರಂತರ ಸ್ಮಾರಕವಾಗಿ ಯಾತ್ರಿಕರನ್ನು ಆಕರ್ಷಿಸುತ್ತಿದೆ. ನಿತ್ಯ ಸಾವಿರಾರು ವಿದ್ಯಾರ್ಥಿಗಳಿಗೆ ಶ್ರೀಗಳವರ ದಿವ್ಯ ಸಂದೇಶವನ್ನು ಮೌನವಾಗಿ ಉಸಿರುತ್ತಿರುವ ಈ ಸ್ಮಾರಕಲಿಂಗ ಶ್ರೀಗಳವರ ರಚನಾತ್ಮಕ ಕಾರ್ಯಗಳಿಗೆ ನಿರಂತರ ಸಾಕ್ಷಿಯಾಗಿ ನಿಂತಿದೆ.

೧೯೬೨ ರಲ್ಲಿ ಸೊಲ್ಲಾಪುರದ ಭಕ್ತರಿಂದ ಆಹ್ವಾನ ಸ್ವೀಕಾರ ಮಾಡಿದರು. ಅಲ್ಲಿ 'ಸಿದ್ಧರಾ...

ಅಮೃತವಾಣಿಯಿಂದ ಆರಂಭ. ಅಲ್ಲಿಯ ವೀರಶೈವ ಬಾಂಧವ ರಲ್ಲಿ ಒಗ್ಗಟ್ಟನ್ನು ಶಾಶ್ವತಗೊಳಿಸಿದ ಶ್ರೇಯ ಅವರದು. ಸಮಾಜಕ್ಕಾಗಿ 'ಮಂಗಲ ಕಾರ್ಯಾಲಯ'ದ ನಿರ್ಮಾಣದ ಸೂಚನೆ ಶ್ರೀಗಳಿಂದಲೇ. 'ಶರಣರ ಭೂಮಿ, ಶ್ರೀಮಂತರ ಸೊನ್ನಲಿಗೆ. ನಿಮ್ಮೆಲ್ಲರಿಗಾಗಿ ನಿಮ್ಮದೇ ಆದ ಒಂದು ಮಂಗಲ ಕಾರ್ಯಾಲಯ ಬೇಡವೇ?' ಎಂದರು. ಒಂದು ವಾರದಲ್ಲಿ ಒಂದು ಲಕ್ಷ ರೂಪಾಯಿ ಸಂಗ್ರಹಿಸಿದರು. ಕೂಡಲೇ ಸಮಿತಿ ರಚನೆಯಾಯಿತು. ಕಟ್ಟಡದ ಅಸ್ತಿವಾರ ಹಾಕಿಸಲಾಯಿತು. ಇಂದು ಮಂಗಳವಾರ ಪೇಟೆಯಲ್ಲಿರುವ ಆ ಮಂಗಲಕಾರ್ಯಾಲಯ ಸೊಲ್ಲಾಪುರದಲ್ಲಿಯ ಕನ್ನಡಿಗರಿಗೆ, ವೀರಶೈವರಿಗೆ ಅತ್ಯಂತ ಪೂಜ್ಯ ಸ್ಥಾನ, ಸಮಾಜ ಕಾರ್ಯಗಳಿಗೆ ಮೀಸಲು. ಆದರ ನಿರ್ಮಾತೃ ಶಿವಯೋಗಿಗಳು.

೧೯೬೩ರಲ್ಲಿ ಸೊಲ್ಲಾಪುರದ ಭಕ್ತರು ಒಲುಮೆಯಿಂದ ಶ್ರೀಗಳನ್ನು ಆಮಂತ್ರಿಸಿ ಅವರ ವಜ್ರಮಹೋತ್ಸವವನ್ನು ವೈಭವದಿಂದ ನಡೆಯಿಸಿದರು. ಬೆಳ್ಳಿಯ ಗಟ್ಟಿಗಳನ್ನಿಟ್ಟು ಅಪ್ಪಗಳ ತುಲಾಭಾರ ಮಾಡಿದರು. ಲಕ್ಷಾಂತರ ರೂಪಾಯಿ ತುಲಾಭಾರದಿಂದ ದೊರೆಯಿತು. ಆ ನಿಧಿಯನ್ನು ಮಂಗಲಕಾರ್ಯಾಲಯದ ನಿಧಿಗೆ ಅರ್ಪಿಸಿದರು. ಅಲ್ಲದೆ ೨೦ ಸಾವಿರ ರೂಪಾಯಿಗಳನ್ನು ರಾಷ್ಟ್ರೀಯ ರಕ್ಷಣಾ ನಿಧಿಗೆ ಕೊಡಮಾಡಿದರು. 'ನನಗಾಗಿ ಏನೊಂದೂ ಬೇಡ, ನಿಮಗಾಗಿ, ಸಮಾಜಕ್ಕಾಗಿ, ನಾಡಿಗಾಗಿ ರಾಷ್ಟ್ರಕ್ಕಾಗಿ ಮಾಡುವುದೆಲ್ಲದರಲ್ಲಿಯೇ ನನ್ನ ಹಿತ ಅಡಗಿದೆ. ನಮ್ಮಲ್ಲಿ ರಾಷ್ಟ್ರೀಯತೆ ಗಟ್ಟಿಗೊಳ್ಳಬೇಕು. ಅದು

ಉಳಿದರೆ ನಾವೂ ಉಳಿಯುತ್ತೇವೆ.' ಎಂದು ಅಪ್ಪಗಳು ಅಂದು ಆಶೀರ್ವಚನ ಕರುಣಿಸಿದರು.

೧೯೬೯ ಮೇ ತಿಂಗಳ ೨ ರಂದು ಸುಕ್ಷೇತ್ರ ಲಚ್ಯಾಣದಲ್ಲಿ ೧೯೬೦೦೦ ಗಣಂಗಳ ಸಾಮೂಹಿಕ ಇಷ್ಟಲಿಂಗ ಪೂಜಾ ಮಹೋತ್ಸವ ಜರುಗಿತು. ಇದು ಬಂಥನಾಳ ಶಿವಯೋಗಿಗಳವರು ಕೈಕೊಂಡ ಅತ್ಯಂತ ದೊಡ್ಡ ಮಹೋತ್ಸವ. ಅವರ ಕೊನೆಯ ಮಹೋತ್ಸವವೂ ಅದುವೇ. ಈ ಮಹೋತ್ಸವವು ವಿಶ್ವಶಾಂತಿಗಾಗಿ ಅವರು ಸಂಘಟಿಸಿದ ಅಂತಿಮ ಪ್ರಯತ್ನವಾಯಿತು.

ಸುಮಾರು ೫ ಲಕ್ಷ ಯಾತ್ರಿಕರು ಚಿಕ್ಕ ಹಳ್ಳಿಯಲ್ಲಿ ಒಂದೆಡೆ ಸೇರಿ ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸಿದರು. ೧೯೬೦೦೦ ಗಣಂಗಳ ಲೆಕ್ಕಾಚಾರ ೫೨೦೦೦೦ ಕ್ಕೆ ಏರಿತು.

ವಿಜಾಪುರ ಜಿಲ್ಲೆಯ ಡೋಣಿ ಸಾಲಿನ ರೈತ ಭಕ್ತರು ಈ ಮಹೋತ್ಸವದಲ್ಲಿ ಪ್ರಸಾದ ವಿತರಣೆಗಾಗಿ ೪೦೦ ಕ್ವಿಂಟಲ್ ಗೋದಿಯನ್ನು ಸಂಗ್ರಹಿಸಿ ತಂದು ಅರ್ಪಿಸಿದರು. ರಾಯಚೂರಿನ ಭಕ್ತರು ೧೦೦ ಕ್ವಿಂಟಲ್ ಅಕ್ಕಿಯನ್ನು ಕಾಣಿಕೆ ಕೊಟ್ಟರು. ಕಲಬುರ್ಗಿಯ ಭಾವುಕರು ಬೆಲ್ಲ ಸಕ್ಕರೆಯನ್ನು ಟ್ರಕ್ಕು ತುಂಬಿಕೊಂಡು ಬಾಜಿ ಬಜಂತ್ರಿಗಳೊಂದಿಗೆ ಮೆರವಣಿಗೆಯೊಂದಿಗೆ ಬಂದು ಸಮರ್ಪಿಸಿದರು. ಕರ್ನಾಟಕ, ಮಹಾರಾಷ್ಟ್ರ, ಆಂಧ್ರ, ತಮಿಳುನಾಡು, ರಾಜಸ್ಥಾನ ಮುಂತಾದ ರಾಜ್ಯಗಳಿಂದ ಸಾಧು ಸಂತರು, ಮಠಾಧೀಶರು, ರಾಜಕಾರಿಣಿಗಳು ಹಾಗೂ ಲಕ್ಷಾಂತರ ಯಾತ್ರಿಕರು ಆಗಮಿಸಿದರು. ಇವ



ವಿಜಾಪುರದಲ್ಲಿ ವಿರಾಜಿಸುತ್ತಿರುವ ೭೭೦ ಅಮರಗಣಂಗಳ ಸ್ಮಾರಕ ಮಹಾಲಿಂಗ

ರೆಲ್ಲರಿಗೆ ಟೆಂಟುಗಳಲ್ಲಿ ವಸತಿ ಸೌಕರ್ಯ ಒದಗಿಸಿದವರು ಕೃಷ್ಣಾ ಮಠದ ಸದ್ಭಕ್ತ ಮಂಡಳಿ. ಕರ್ನಾಟಕ ರಾಜ್ಯದ ಪೋಲೀಸ ಪಡೆಯೊಂದು ಬೀಡುಬಿಟ್ಟು ತನ್ನ ಕಾರ್ಯದಲ್ಲಿ ಶ್ರೀಗಳವ ರಿಂದ ಮೆಚ್ಚುಗೆ ಪಡೆಯಿತು. ಪಂಚಾಕ್ಷರಿಮಂತ್ರ ಲಕ್ಷಾಂತರ ಶ್ರೀಕಂಠಗಳಿಂದ ಏಕಕಾಲದಲ್ಲಿ ನಭೋಮಂಡಲ ತುಂಬಿ ಕೊಂಡು, ಅಂದಿನ ಸಾಮೂಹಿಕ ಇಷ್ಟಲಿಂಗ ಪೂಜಾ ದೃಶ್ಯಾವಳಿ ಚಲನಚಿತ್ರದಲ್ಲಿ ಶಾಶ್ವತವಾಗಿ ಉಳಿಯುವಂತಾದುದು ನಾಡಿನ ಭಾಗ್ಯ ವಿಶೇಷ.

ಈ ಅಭೂತಪೂರ್ವ ಸಮಾರಂಭದಲ್ಲಿ ಕೂಡಿದ ಪ್ರಡಿ ಕಾಸು ಸುಮಾರು ೨೦೦೦೦೦ ರೂಪಾಯಿ ಅದನ್ನು ಗ್ರಾಮಾಂತರ ಪ್ರದೇಶದಲ್ಲಿ “ಗುರುಕುಲ” (ಲಚ್ಯಾಣದಲ್ಲಿ) ಸ್ಥಾಪಿಸಲು ಜಾತ್ಯಾತೀತ ವಿದ್ಯಾಕೇಂದ್ರಕ್ಕೆ ಅರ್ಪಿಸಿದರು. ಶ್ರೀ ವೃಷಭಲಿಂಗೇಶ್ವರ ವಿದ್ಯಾವರ್ಧಕ ಸಂಸ್ಥೆ”ಯನ್ನು ನೈತಿಕ ಶಿಕ್ಷಣದ ಬುನಾದಿಯಲ್ಲಿ ನಡೆಯಿಸಲು ಆಶೀರ್ವದಿಸಿದರು. ಈ ಸಂಸ್ಥೆಗೆ ಮಠದ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಸ್ಥಿರಾಸ್ತಿಯನ್ನು ಒದಗಿಸಿದರು. ಅವರ ಆದೇಶದ ಮೇರೆಗೆ ನಿವೇಶನ ಲಭ್ಯವಾಯಿತು. ಕಟ್ಟಡವನ್ನು ನಿರ್ಮಿಸಲು ಅಪ್ಪಣೆ ಮಾಡಿದರು. ಧಾರಾಳವಾಗಿ ಸಂಪದವನ್ನೂ ಕರುಣಿಸಿದರು. ಆದರೆ ನಿಷ್ಠಾವಂತ ಕಾರ್ಯಕರ್ತರ ಅಭಾವದಿಂದ ಶ್ರೀಗಳವರ ಘನವಾದ ಅಂತಿಮ ಕನಸು ನನಸಾಗಿಲ್ಲ, ಆಗಬೇಕಾಗಿದೆ.

## ಉತ್ತರಾಧಿಕಾರಿ ವೃಷಭಲಿಂಗರಿಗೆ ಆಶೀರ್ವಾದ

ಲಚ್ಯಾಣದಲ್ಲಿ ಜರುಗಿದ ಇಷ್ಟಲಿಂಗ ಪೂಜಾ ಮಹೋತ್ಸವದ ನಂತರ ಶಿವಯೋಗಿಗಳಲ್ಲಿ ಅಶಕ್ತತೆ ತಲೆದೋರಿತು. ಅವರ ವಯಸ್ಸು ಎಪ್ಪತ್ತಾದಾಗ ಅದು ಸ್ವಾಭಾವಿಕ. ಅವರು ಅವಿಶ್ರಾಂತರಾಗಿಯೂ ಸಂಬಿ ಕರೆದಡೆಗಳಲ್ಲಿ ಓಗೊಟ್ಟು ರಚನಾತ್ಮಕ ಕಾರ್ಯಕ್ಕೆ ಮುಂದಾಗಿ ನಡೆದರು. ಹಿತೈಷಿ ಹಿರಿಯರು ಹೋಗಕೂಡದೆಂದು ಪ್ರಾರ್ಥಿಸಿದರೂ ಶ್ರೀಗಳು ದೈಹಿಕ ದಣಿವನ್ನು ಲಕ್ಷಿಸಲಿಲ್ಲ. ಬನಹಟ್ಟಿಯಲ್ಲಿ ವಿದ್ಯಾಸಂಸ್ಥೆಯ ಆರ್ಥಿಕ ವಿಪತ್ತನ್ನು ದೂರುಮಾಡಲು ಹೋದರು (೧೯೭೮). ಅನಂತರ ಇಂಡಿಯಲ್ಲಿಯ ಶಾಂತೇಶ್ವರ ವಿದ್ಯಾ ಕೇಂದ್ರದ ಅಭಿವೃದ್ಧಿಗೆಂದು (೧೯೭೧) ಪ್ರವಚನ ಪ್ರಾರಂಭಿಸಿದರು. ಇದುವೇ ಅವರ ಅಂತಿಮ ಪ್ರವಚನವಾಯಿತು.

೧೯೭೧ ಜುಲೈ ತಿಂಗಳಲ್ಲಿ ತುಂಬಾ ಅಶಕ್ತರಾಗಿ ಲಚ್ಯಾಣದ ಮಠದಲ್ಲಿ ವಿಶ್ರಾಂತಿಗೆಂದು ದಯಮಾಡಿಸಿದ ಸಂದರ್ಭ. ಹುಬ್ಬಳ್ಳಿಯ ಮೂರು ಸಾವಿರ ಮಠದ ಜಗದ್ಗುರುಗಳ ಆಶ್ರಯದಲ್ಲಿ ಅಧ್ಯಯನ ಮಾಡುತ್ತಿದ್ದ ಉತ್ತರಾಧಿಕಾರಿ ವೃಷಭಲಿಂಗ (ಬಾಲ ಶಿವಯೋಗಿಗಳು) ಅವರನ್ನು ಕರೆಯಿಸಿಕೊಂಡರು. ಅವರಿಗೆ ಅನುಗ್ರಹ, ಆಶೀರ್ವಾದ ಕರುಣಿಸಿದ ಸನ್ನಿವೇಶವನ್ನು ಕಾಣುವ ಭಾಗ್ಯ ನನ್ನದಾಯಿತು.

"ಮಗೂ ವೃಷಭಲಿಂಗ, ಬಂಥನಾಳ ಪೀಠ ನಂಬಿನಡೆದರೆ ಭಾಗ್ಯದ ಸಿದ್ಧಿ, ಅಪನಂಬಿಕೆಯಾದರೆ ಅಪಜಯ ಖಂಡಿತ. ಈ ಪೀಠವನ್ನು ಅಲಂಕರಿಸಿದ ತಪೋನಿಧಿಗಳಾದ ಶಿವಯೋಗಿಗಳ ವರ ಧೀಮಂತ ಶಕ್ತಿಗುಪ್ತನಿಧಿಯಾಗಿ ನಿನ್ನ ಬೆಂಗಾವಲಿಗುಂಟು. ಮುಗ್ಧ ಭಕ್ತರು ಪೀಠದ ನಿಜವಾದ ಆಸ್ತಿ. ಅವರ ಹಿತೈಷಿಯಾಗಿ ಹಿತಚಿಂತಕರಾಗಿ ಬಾಳುವುದು ಉತ್ತರಾಧಿಕಾರಿಯಾದ ನಿನ್ನ ಹೊಣೆ.

ಸಮಾಜ, ನಾಡು, ರಾಷ್ಟ್ರ ಒಂದಕ್ಕೊಂದು ಪೋಷಕ. ರಾಷ್ಟ್ರಧರ್ಮ ಪಾಲನೆಯು ಆದ್ಯ ಕರ್ತವ್ಯ, ಸ್ವಾತಂತ್ರ್ಯ ಹೋರಾಟವಲ್ಲಿ ಪರೋಕ್ಷವಾಗಿ ೧೯೩೫ ರಿಂದ ೧೯೭೪ ರವರೆಗೆ ಬಂಥನಾಳ ಪೀಠ ಅಮೂಲ್ಯ ಸೇವೆ ಸಲ್ಲಿಸಿದೆ. ಇಂಥ ರಾಷ್ಟ್ರೀಯ ಕಾರ್ಯಗಳಿಗಾಗಿ ನೀವು ಮುಂದಾಗಬೇಕು, ಎಂದು ತಲೆ ನೇವರಿಸುತ್ತ ವೃಷಭಲಿಂಗರ ಪುಸ್ತಕದ ಮೇಲೆ ಹಸ್ತವನ್ನಿರಿಸಿ ಆಶೀರ್ವದಿಸಿದರು. ಅವರಲ್ಲಿಯ ಆಳವಾದ ರಾಷ್ಟ್ರಪ್ರೇಮ, ಸಮಾಜ ಬಾಂಧವರ ಬಗೆಗೆ ಅವರಲ್ಲಿದ್ದ ಅಭಿಮಾನ ಉಕ್ಕಿ ಬಂದಿತು. ಇಂದು ವೃಷಭಲಿಂಗ ಶಿವಯೋಗಿಗಳು (ವಯಸ್ಸು ೩೩) ಅಪ್ಪಗಳ ಆದೇಶವನ್ನು ಅನುಸರಿಸಿ ಮುನ್ನಡಿ ಇಡುತ್ತಿರುವುದನ್ನು ಕಾಣುತ್ತಿದ್ದೇವೆ.

# ದೇಹ ಅಳಿಯಿತು ಕೀರ್ತಿ ಉಳಿಯಿತು

೧೯೭೨ ಜನೇವರಿ ತಿಂಗಳಲ್ಲಿ ಶಿವಯೋಗಿಗಳು ಯೋಗ ನಿದ್ರೆಯೋಪಾದಿಯಲ್ಲಿ ಹಾಸಿಗೆ ಹಿಡಿದರು. ಮಾತು ಮೌನ ವಾಯಿತು. ಅಂತಿಮದರ್ಶನವೆಂದು ನಿತ್ಯ ಬರುವ ಯಾತ್ರಿಕ ರಿಗೆ ದಿನವಿಡೀ ದರ್ಶನದ ಏರ್ಪಾಡಾಯಿತು. ಶಾಂತ ಚಿತ್ತ ದಿಂದ ಕಣ್ತುಂಬ ಬಂದ ಯಾತ್ರಿಕರನ್ನು ನಿರುಕಿಸಿ ಮುಗುಳ್ನಗೆ ಬೀರುವರು. ಬಂದವರಿಗೆ ಪ್ರಸಾದದ ವ್ಯವಸ್ಥೆ ಮಾಡಿರಿ ಎಂದು ಕಣ್ಸನ್ನೆಯಿಂದ ಮಠದ ಕಾರ್ಯಕರ್ತರಿಗೆ ದಿನವಿಡೀ ಸೂಚನೆ ಕೊಡುವರು. ದರ್ಶನ ಪಡೆದವರ ಕಣ್ಣುಗಳಲ್ಲಿ ಧಾರಾಕಾರ ವಾದ ಅಶ್ರುಧಾರೆ. ತಮ್ಮ ಜೀವನವನ್ನೇ ಸಮಾಜಕ್ಕಾಗಿ, ಶಿಕ್ಷಣ ಕ್ರಾಂತಿಗಾಗಿ ಸಮರ್ಪಿಸಿದ ಪುಣ್ಯಜೀವಿಯು ನಮ್ಮನ್ನು ತಬ್ಬಲಿಯನ್ನಾಗಿ ಮಾಡುವುದಲ್ಲವೆಂಬ ದುಃಖ ಜಿಲ್ಲೆಯ ತುಂಬ ವ್ಯಾಪಿಸಿತು.

೧೯೭೨ ಮೇ ೭ ರಂದು ಬೆಳಗಿನ ಶಿವಾರ್ಚನೆ ಮಲಗಿ ದಲ್ಲಿಯೇ ಪೂರೈಸಿದರು ಶಿವಯೋಗಿಗಳು ಅವರು ಒರಗಿ ದಾಗಲೂ ಎಡಗೈ ಕಾಟಕೋನಾಕಾರವಾಗಿ ನಿಂತುದನ್ನು ಕಂಡ ಸಾವಿರಾರು ಜನರು ಬೆರಗಾಗಿದ್ದರು. ಅವರು ಶಿವಾರ್ಚನೆ ಯಲ್ಲಿ ಲಿಂಗನಿರೀಕ್ಷಣೆ ಮಾಡಿದ ಅರವತ್ತು ವರುಷಗಳ ಸಾಧ ನೆಯ ಸಂಕೇತವಾಗಿ ಎಡಹಸ್ತ ತನ್ನ ನಿತ್ಯದ ಸ್ಥಿತಿಯನ್ನು ಕಾಯ್ದುಕೊಂಡುದೊಂದು ಅಚ್ಚರಿ.

ಅಂದು ಮಧ್ಯಾಹ್ನ ೧೨ ಗಂಟೆಗೆ ಎಡಗೈ ಮೆಲ್ಲಗೆ ಒರಗಿತು. ಆಗ ನೋಡು ನೋಡುತ್ತಿದ್ದಂತೆ ಶಿವಯೋಗಿಗಳವರ ಮುಖದಿಂದ ಓಂಕಾರ ಮಂತ್ರದ ನಿನಾದ ! ಶಿವಯೋಗಿಗಳು ಶಿವನ ಮಡಿಲೊಳಡಗಿದರು. ದೇಹ ಅಳಿಯಿತು; ಕೀರ್ತಿ ಉಳಿಯಿತು.

## ಬಂಥನಾಳ ಶ್ರೀ ಸಂಗನಬಸವ ಶಿವಯೋಗಿಗಳವರ ಜೀವಿತದ ಮುಖ್ಯ ಘಟನಾವಳಿ

೧೯೦೦ ಜುಲೈ ೨೭ : ಮಂಗಳವಾರ ಪ್ರಾತಃಕಾಲ ಜನನ.

೧೯೦೫ ಜೂನ : ಸ್ವಗ್ರಾಮ ಮಸೂತಿಯಲ್ಲಿ ಪ್ರಾಥಮಿಕ ಶಿಕ್ಷಣ ಪ್ರಾರಂಭ.

೧೯೧೧ ಅಕ್ಟೋಬರ : "ಹರಿಶ್ಚಂದ್ರ" ನಾಟಕದಲ್ಲಿ "ತಾರಾಮತಿ"ಯಾಗಿ ಅಭಿನಯ.

೧೯೧೨ ಮೇ : ಮುಲ್ಕಿ ಪರೀಕ್ಷೆಯಲ್ಲಿ ಉತ್ತೀರ್ಣರಾದುದು.
ಜೂನ : ಇಂಗ್ಲೀಷ ಶಾಲೆಗೆ ಹೋಗಲು ತಿರಸ್ಕಾರ.
ಅಗಸ್ಟ : ಬಬಲೇಶ್ವರದ "ಸಂಸ್ಕೃತ ಪಾಠ ಶಾಲೆ"ಯಲ್ಲಿ ಅಧ್ಯಯನಕ್ಕೆ ಪ್ರವೇಶ.

೧೯೧೪ ಜೂನ : ಸಂಸ್ಕೃತ ಕಂಠಪಾಠ ಸ್ಪರ್ಧೆಯಲ್ಲಿ ಸುವರ್ಣ ಪದಕ ಪ್ರಾಪ್ತಿ.

೧೯೧೫ ಜೂನ : ಮುಳಗುಂದ ಬಾಲಲೀಲಾ ಮಹಾಂತ ಶಿವಯೋಗಿಗಳ ಗದ್ದುಗೆ ದರ್ಶನ, ಪ್ರಾರ್ಥನೆಯಿಂದ ಪ್ರೇರಣೆ ಪ್ರಾಪ್ತಿ, ಕಾಲಜ್ಞಾನ ಸೂಚನೆ,
ಜುಲೈ : ಯರನಾಳ ಮಠದಲ್ಲಿ ದೀಕ್ಷಾ ಸಂಸ್ಕಾರ. ಪೂಜ್ಯ ಪಂಪಾಪತಿ ಸ್ವಾಮಿಗಳಿಂದ ಅನುಗ್ರಹ, ಅವರಿಂದ ಕಾಲಜ್ಞಾನ ಸೂಚನೆ.

೧೯೧೬ ಶ್ರಾವಣ : ಬಂಥನಾಳ ಮಠದ ಉತ್ತರಾಧಿಕಾರಿಯಾಗಿ ಪಟ್ಟಾಭಿಷೇಕ.

೧೯೧೭–೨೦ ವೀರಶೈವ ಸಾಹಿತ್ಯ, ವೇದ, ಉಪನಿಷತ್ತುಗಳ ಸ್ವಯಂ ಅಭ್ಯಾಸ. ಸಾಧನೆಯ ದಾರಿಯಲ್ಲಿ ಪರಿಶ್ರಮ.

೧೯೨೧–೨೪ ಭಾರತದ ಪುಣ್ಯಕ್ಷೇತ್ರಗಳ ದರ್ಶನ, ಅನುಷ್ಠಾನ ಮತ್ತು ಅಧ್ಯಯನ, ಮಾಸಿಕ ಶಿವಾನುಭವ ಪ್ರವಚನ ಆರಂಭ ಸುಕ್ಷೇತ್ರ ಲಚ್ಯಾಣ ಮಠದ ಅಧಿಕಾರ ಸ್ವೀಕಾರ. ಶಾಖಾ ಮಠಗಳಲ್ಲಿ ಪ್ರವಚನ. ಭಕ್ತರೊಡನೆ ಸಾಮರಸ್ಯ ಕುರಿತು ಸಂಚಾರ.

೧೯೨೩–೨೬ ಕರ್ನಾಟಕದ ಗಾಂಧಿ ಹರ್ಡೇಕರ ಮಂಜಪ್ಪನವರ ಸಂದರ್ಶನ, ಅವರಿಂದ "ರಾಷ್ಟ್ರೀಯ ದೀಕ್ಷೆ" ಸ್ವೀಕಾರ ಸ್ವದೇಶಿ ಪ್ರೇಮ ಹಾಗೂ ಖಾದಿ ಪ್ರಚಾರಕ್ಕಾಗಿ ಸಂಚಾರ. ವಿದೇಶಿ ಬಟ್ಟೆಗಳಿಗೆ ಬಹಿಷ್ಕಾರ, ಖಾದಿ ಧಾರಿಗಳಾಗಲು ನಿರ್ಧಾರ. ಸ್ವಾತಂತ್ರ್ಯಯೋಧರ ಕೂಡ ಗುಪ್ತ ಸಂಬಂಧ ಭೂಗತ ಯೋಧರಿಗೆ ಸಕಲ ನೆರವು.

೧೯೨೭–೩೦ ಆಲಮಟ್ಟಿಯಲ್ಲಿ ವಿದ್ಯಾಕೇಂದ್ರ ಸ್ಥಾಪನೆ. ಶರಣರ ಸಂದೇಶ ಪ್ರಚಾರಕ್ಕಾಗಿ ಪ್ರಕಟನೆಗಳನ್ನು ಹೊರಡಿಸಿದರು. ಧಾರ್ಮಿಕ ಜಾಗೃತಿಯೊಂದಿಗೆ ಶೈಕ್ಷಣಿಕ ಕ್ರಾಂತಿಗೆ ಅಣಿಯಾದುದು.

೧೯೩೧–೩೨ ಮೂಢನಂಬಿಕೆ ವಿರುದ್ಧ ಪ್ರಚಾರ. ಜಾತೀಯತೆಯ ನಿರ್ಮೂಲನಕ್ಕೆ ಹಿಂದುಳಿದ ಸಮಾಜದ ಭಕ್ತರೊಡನೆ ಸಾಮರಸ್ಯ ಪ್ರಾರಂಭ.

೧೯೩೩– ಲಚ್ಯಾಣದಲ್ಲಿ ೬೩ ಪುರಾತನರ ಮಂಟಪ ಪೂಜಾ ಮಹೋತ್ಸವ. ಆರು ತಿಂಗಳ ಕಾಲ ಲಚ್ಯಾಣದಲ್ಲಿ ಉಗ್ರ ಅನುಷ್ಠಾನ ಕೈಕೊಂಡುದು.

೧೯೩೪–೪೦ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳನ್ನು ಗ್ರಾಮಗಳಲ್ಲಿ ಸ್ಥಾಪಿಸಲು ಪ್ರವಚನ. ಉಚಿತ ಪ್ರಸಾದ ನಿಲಯಗಳ ಪ್ರಾರಂಭ. ಗರಡಿ ಸಾಧಕರಿಗೆ ವ್ಯಾಯಾಮ ಶಾಲೆಗಳ ನಿರ್ಮಾಣ. "ವಿದ್ಯಾರ್ಥಿಗಳೇ ದೇವರು" ಎಂದು ನಿತ್ಯ ಪ್ರಚಾರ.

೧೯೪೧ ಎಪ್ರೇಲ್ : ಹಿಮಾಲಯದಲ್ಲಿ ಋಷಿಗಳ ಆಶ್ರಮಗಳಿಗೆ ಸಂದರ್ಶನ, ಚರ್ಚೆ.

ಜೂನ್ : ಆರು ತಿಂಗಳ ಅನುಷ್ಠಾನ. (ಲಚ್ಯಾಣದ ಕಮರೀಮಠದಲ್ಲಿ)

೧೯೪೨ ವಿಜಾಪುರ ಜಿಲ್ಲಾ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಆಜೀವ ಅಧ್ಯಕ್ಷರೆಂದು ಅಧಿಕಾರ ಸ್ವೀಕಾರ, ಪ್ರವಚನಗಳ ಮೂಲಕ ಶಿಕ್ಷಣ ಸಂಸ್ಥೆಗೆ ನಿಧಿ ಸಂಗ್ರಹ ಪ್ರಾರಂಭ.

೧೯೪೩ ಬಾಗೇವಾಡಿಯಲ್ಲಿ 'ಬಸವ ಪುರಾಣ'. ದೇವಾಲಯದ ಜೀರ್ಣೋದ್ಧಾರ. ಮಾಧ್ಯಮಿಕ ಶಾಲೆ ಸ್ಥಾಪನೆಗೆ ನಿಧಿ ಸಂಗ್ರಹ.

೧೯೪೪ ಬಸವೇಶ್ವರರ ಅಮೃತ ಶಿಲಾಮೂರ್ತಿ ತಯಾರಿಸಿ ಅರ್ಪಿಸಿದುದು.

೧೯೪೫ ಜೂನ : ವಿಜಾಪುರದಲ್ಲಿ ವಿಜಯ ಕಾಲೇಜ ಸ್ಥಾಪನೆ.

ನೂತನ ಕಟ್ಟಡ ನಿರ್ಮಾಣಕ್ಕೆ ಸತತ ಪ್ರಯತ್ನ. ಲಕ್ಷಾಂತರ ನಿಧಿ ಸಂಗ್ರಹ.

೧೯೪೬-೫೦ ಜಿಲ್ಲೆಯ ಬೇರೆ ಸ್ಥಳಗಳಲ್ಲಿ (ಗ್ರಾಮಾಂತರ ಪ್ರದೇಶ) ವಿದ್ಯಾ ಸಂಸ್ಥೆಗಳ ಸ್ಥಾಪನೆಗಾಗಿ ಪ್ರವಚನ ಹಾಗೂ ಲಕ್ಷಾಂತರ ನಿಧಿ ಸಂಗ್ರಹ.

೧೯೫೧ ಸುಕ್ಷೇತ್ರ ಲಚ್ಯಾಣದಲ್ಲಿ ಸರ್ವಧರ್ಮ ಸಮ್ಮೇಲನ.

೧೯೫೨ ಹುನಗುಂದದಲ್ಲಿ ಪ್ರವಚನ. ಮಾಧ್ಯಮಿಕ ಶಾಲೆ ಮತ್ತು ಕಾಲೇಜು ಸ್ಥಾಪನೆಗಾಗಿ ಲಕ್ಷಾಂತರ ನಿಧಿ ಸಂಗ್ರಹಿಸಿಕೊಟ್ಟರು.

೧೯೫೩ ರಾಯಚೂರ ಕೃಷ್ಣಾ ಮಠದಲ್ಲಿ ಪ್ರವಚನ. ಸಮಾಜ ಕಾರ್ಯಗಳಲ್ಲಿ ಸತತ ಪ್ರಯತ್ನ, ರಾಷ್ಟ್ರೀಯ ವಿಕಾಸ ಯೋಜನೆಗಳಿಗೆ ಶಾಖಾ ಮಠಗಳ ಜಾತ್ರೆಗಳಲ್ಲಿ ವಿಶೇಷ ಪ್ರಾಶಸ್ತ್ಯ ಆರಂಭ.

೧೯೫೪ ವಿಜಾಪುರದಲ್ಲಿ ೭೭೦ ಅಮರ ಗಣಂಗಳ ಮಂಟಪ ಪೂಜಾ ಮಹೋತ್ಸವ ಕಾಲೇಜು ವಿಸ್ತರಣೆಗಾಗಿ ನಿಧಿ ಅರ್ಪಣ.

೧೯೫೫-೫೯ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿ ಆಯ್ಕೆ ಮಹಾಸಭೆಯ ಸುಸ್ಥಿತಿಗಾಗಿ ಪ್ರವಾಸ ಪ್ರವಚನ ನಿಧಿ ಸಂಗ್ರಹ. ಬಸವ ಕಲ್ಯಾಣದಲ್ಲಿ ಅನುಭವ ಮಂಟಪ ಕಟ್ಟಡ ನಿರ್ಮಾಣ. ಮುಂಬಯಿ, ಪುಣೆ, ನಾಗಪುರ, ಬಾರ್ಸಿ, ಸೊಲ್ಲಾಪುರ, ಕಲ್ಯಾಣ, ಕಲಬುರ್ಗಿ, ಬೀದರಗಳಲ್ಲಿ ಪ್ರವಚನ.

ವಿಜಾಪುರ ವಿಜಯ ಕಾಲೇಜದ ವಲಯದಲ್ಲಿ ವಿದ್ಯಾನಗರ ನಿರ್ಮಾಣದ ಕಾರ್ಯ ಆರಂಭ. ವಾಣಿಜ್ಯ ವಿದ್ಯಾಲಯದ ಸ್ಥಾಪನೆಗೆ ಪ್ರಯತ್ನ.

೧೯೬೦ ಅಖಿಲ ಭಾರತ ಶಿವಾನುಭವ ಸಮ್ಮೇಲನದಲ್ಲಿ ಅಮೋಘ ಭಾಷಣ. ಡಿ. ಸಿ. ಪಾವಟೆಯವರಿಗೆ ಅಧ್ಯಕ್ಷತೆಯನ್ನು ಕೊಡಮಾಡಿದ್ದು.

೧೯೬೧ ಅಮರಗಣಂಗಳ ಮಹಾಲಿಂಗ ಪ್ರತಿಷ್ಠಾಪನೆ. ವಿಜಾಪುರ.

೧೯೬೨ ಸೊಲ್ಲಾಪುರದಲ್ಲಿ ಮಂಗಲ ಕಾರ್ಯಾಲಯ ನಿರ್ಮಾಣಕ್ಕೆ ಲಕ್ಷಾಂತರ ನಿಧಿ ಸಂಗ್ರಹ.

೧೯೬೩ ಸೊಲ್ಲಾಪುರದಲ್ಲಿ ವಜ್ರಮಹೋತ್ಸವ. ಬೆಳ್ಳಿಯಲ್ಲಿ ತುಲಾಭಾರ. ಬಂದ ಲಕ್ಷಾಂತರ ನಿಧಿ ಸಮಾಜ ಕಾರ್ಯಗಳಿಗೆ ಸಮರ್ಪಣ. ರಾಷ್ಟ್ರೀಯ ರಕ್ಷಣಾ ನಿಧಿಗೆ ೨೦ ಸಾವಿರ ರೂಪಾಯಿ ಸಲ್ಲಿಸಿದರು.

೧೯೬೪-೬೮ ಮುದ್ದೇಬಿಹಾಳ, ಬನಹಟ್ಟಿ, ಜಮಖಂಡಿ, ತೇರದಾಳ, ಸಿಂದಗಿ, ಇಂಡಿ, ತಾಂಬಾ, ಇಲಕಲ್ಲ, ಬಾಗೇವಾಡಿಗಳಲ್ಲಿ ಶಾಲೆ-ಕಾಲೇಜು ಸ್ಥಾಪನೆಗಾಗಿ ಪ್ರವಚನ ಹಾಗೂ ನಿಧಿ ಸಂಗ್ರಹಿಸಿ ಕೊಟ್ಟುದು.

೧೯೬೯ ಮೇ ೨ ರಂದು ಲಚ್ಯಾಣದಲ್ಲಿ ೧೯೬೦೦೦ ಗಣಂಗಳ ಸಾಮೂಹಿಕ ಲಿಂಗಪೂಜಾ ಮಹೋತ್ಸವ.

'ಶ್ರೀ ವೃಷಭಲಿಂಗೇಶ್ವರ ವಿದ್ಯಾವರ್ಧಕ ಸಂಸ್ಥೆ ಲಚ್ಯಾಣ' ಸಂಸ್ಥೆಯ ನಿರ್ಮಾಣ. ಅದರ ಅಭಿವೃದ್ಧಿಗೆ

೧೯೬೦೦೦ ರೂಪಾಯಿ ನಿಧಿ ಅರ್ಪಣ. ಲಕ್ಷಾಂತರ ಬೆಲೆ ಬಾಳುವ ಸ್ಥಾವರ ಸ್ಥಿರಾಸ್ತಿಯು ಕೊಡುಗೆ.

೧೯೭೧ ಮಾರ್ಚ : ಉತ್ತರಾಧಿಕಾರಿಯಾದ ಶ್ರೀ ವೃಷಭಲಿಂಗ ಶಿವಯೋಗಿಗಳಿಗೆ ಬಂಥನಾಳದಲ್ಲಿ ಪಟ್ಟಾಧಿಕಾರ ಸಮಾರಂಭ.

ಅಗಸ್ಟ : ಬನಹಟ್ಟಿಯಲ್ಲಿ ಪ್ರವಚನ.

ಅಕ್ಟೋಬರ್ : ಇಂಡಿಯಲ್ಲಿ ಅಂತಿಮ ಪ್ರವಚನ.

ನವ್ಹೆಂಬರ : ಅನಾರೋಗ್ಯದಿಂದ ಪ್ರವಾಸ-ಪ್ರವಚನಗಳಿಗೆ ಆತಂಕ.

೧೯೭೨ ಜನೇವರಿ : ಹುಬ್ಬಳ್ಳಿ ಮೂರು ಸಾವಿರ ಮಠದ ನಿರಂಜನ ಜಗದ್ಗುರುಗಳೊಂದಿಗೆ ಅಂತಿಮ ಸಂದರ್ಶನ. ಫೆಬ್ರುವರಿಯಿಂದ ಮೇ. ಶಿವಯೋಗಿಗಳು ಅಂತರ್ಮುಖಿಗಳಾಗಿ ವಿಶ್ರಮಿಸಿದರು. ಸಾವಿರಾರು ಜನ ಯಾತ್ರಿಕರು ಭಕ್ತರಿಂದ ನಿತ್ಯದರ್ಶನ.

೧೯೭೨ ಮೇ : ೭ ರಂದು ಭಾನುವಾರ ಲಿಂಗೈಕ್ಯ.

# ವೀರಶೈವ ಪುಣ್ಯಪುರುಷ ಸಾಹಿತ್ಯ[illegible]

೧ ಡೆಪ್ಯೂಟಿ ಚೆನ್ನಬಸಪ್ಪನವರು – ಎಂ. ಜಿ. ಹಂದ್ರಾಳ
೨ ಸಕ್ಕರಿ ಕರಡೆಪ್ಪನವರು – ಬಸವರಾಜ ಅಜ್ಜಂಪುರಶೆಟ್ರು
೩ ವಾರದ ಮಲ್ಲಪ್ಪನವರು – ವಿ. ಶಿವಾನಂದ
೪ ಸಿರಸಂಗಿ ಲಿಂಗರಾಜರು – ದೇವೇಂದ್ರಕುಮಾರ ಹಕಾರಿ
೫ ಕೆ. ಪಿ. ಪುಟ್ಟಣ್ಣ ಶೆಟ್ಟರು – ಚ. ಸುಂದರೇಶನ್
೬ ಹರ್ಡೇಕರ ಮಂಜಪ್ಪನವರು – ಸಿದ್ದಯ್ಯ ಪುರಾಣಿಕ
೭ ಮಧುರಚೆನ್ನರು – ಗುರುಲಿಂಗ ಕಾಪಸೆ
೮ ಬಿ. ಶಿವಮೂರ್ತಿಶಾಸ್ತ್ರಿಗಳು – ಸಾ. ಶಿ. ಮರುಳಯ್ಯ
೯ ಭೂಮರಡ್ಡಿ ಬಸಪ್ಪನವರು – ಎಂ. ಎಸ್. ಲಠ್ಠೆ
೧೦ ಡಿ. ಸಿ. ಪಾವಟೆಯವರು – ಬಿ. ಸಿ. ಜವಳಿ
೧೧ ಚಂದ್ರಶೇಖರ ಪಾಟೀಲರು – ಸಂಗು ಕೋಟಿ
೧೨ ಮೈಲಾರ ಮಹದೇವಪ್ಪನವರು – ಸಿ. ವ್ಹಿ. ಕೆರಿಮನಿ
೧೩ ಗುಬ್ಬಿ ವೀರಣ್ಣನವರು – ಸದಾನಂದ ಕನವಳ್ಳಿ
೧೪ ಜಸ್ಟಿಸ್ ಮಹದೇವಯ್ಯನವರು – ಎಸ್. ವಿದ್ಯಾಶಂಕರ
೧೫ ಎಚ್. ಎಫ್. ಕಟ್ಟಿಮನಿಯವರು – ಎಸ್. ಆರ್. ಗುಂಜಾಳ
೧೬ ಪಿ. ಆರ್. ಕರಿಬಸವ ಶಾಸ್ತ್ರಿಗಳು – ಎಂ. ಜಿ. ನಂಜುಂಡಾರಾಧ್ಯ
೧೭ ಬಸವಪ್ಪಶಾಸ್ತ್ರಿಗಳು – ಸಿ. ಎಸ್. ಶಿವಕುಮಾರಸ್ವಾಮಿ
೧೮ ಸೊಲ್ಲಾಪುರದ ರುದ್ರಮ್ಮನವರು – ರವಿದೇವಿ, ಸುಗ್ಗಲಾದೇವಿ
೧೯ ತಮ್ಮಣ್ಣಪ್ಪನವರು ಚಿಕ್ಕೋಡಿ – ಜೆ. ಎಸ್. ಕುಳ್ಳಿ
೨೦ ಚನ್ನಮಲ್ಲಿಕಾರ್ಜುನರು – ಚನ್ನಪ್ಪ ಯರೇಸೀಮೆ
೨೧ ರಾಜಾ ಲಖಮಗೌಡರು – ಎಸ್. ಜಿ. ಥಿವಾರಿ
೨೨ ವೈ. ನಾಗೇಶಶಾಸ್ತ್ರಿಗಳು – ಜೋಳದರಾಶಿ ದೊಡ್ಡನಗೌಡ
೨೩ ಬಸರಿಗಿಡದ ವೀರಪ್ಪನವರು – ಶಾಂತರಸ
೨೪ ಸರದಾರ ವೀರನಗೌಡರು – ಶಾಂತಾದೇವಿ ಮಾಳವಾಡ
೨೫ ಹಳಕಟ್ಟಿ ಫಕೀರಪ್ಪನವರು – ಸಂಗಮನಾಥ ಹಂಡಿ
೨೬ ಗುಬ್ಬಿ ತೋ[illegible]ದಪ್ಪನವರು – ಆರ್. ರಾಚಪ್ಪ
೨೭ ದೊಡ್ಡಮೇಟಿ ಅಂದಾನಪ್ಪನವರು – ಜ್ಞಾನದೇವ ದೊಡ್ಡಮೇಟಿ
೨೮ ಎಂ. ಬಸವಮ್ಮನವರು – ಎಚ್. ದೇವೀರಪ್ಪ
೨೯ ಪಂಡಿತಪ್ಪನವರು ಚಿಕ್ಕೋಡಿ – ದು. ನಿಂ. ಬೆಳಗಲಿ
೩೦ ಪಾವಟೆ ಸಿದ್ರಾಮಪ್ಪನವರು – ಬಿ. ಸಿ. ಜವಳಿ
೩೧ ಹಾನಗಲ್ಲ ಕುಮಾರಶಿವಯೋಗಿಗಳು – ಜ. ಚ. ನಿ.
೩೨ ರಾಂಪುರೆ ಮಹಾದೇವಪ್ಪನವರು – ಮ. ಗು. ಬಿರಾದಾರ